# ಗಾಂಧಿ ಮಹಾತ್ಮನು ದಾಂಡಿಗೆ ಹೊರಟರೆ ನಡು ನಡುಗಿತು ಲಂಡನ್

23

■ ಡಾ। ಎಚ್. ಡಿ. ಚಂದ್ರಪ್ಪಗೌಡ

1946 60 2006




ವಜ್ರ ಮಹೋತ್ಸವ ವರ್ಷ

■ ಪ್ರಕಾಶಕರು ■
ರಾಷ್ಟ್ರೀಯ ಶಿಕ್ಷಣ ಸಮಿತಿ
ಬಾಲರಾಜ ಅರಸ್ ರಸ್ತೆ ಶಿವಮೊಗ್ಗ - 577 201



ಸ್ಥಾಪನೆ: 1946

ಗಾಂಧೀಜಿಯವರ ಕರೆ, ನೆಹರೂರವರ ವೈಜ್ಞಾನಿಕ ದೃಷ್ಟಿಕೋನ
ಸ್ವಾತಂತ್ರ್ಯ ಹೋರಾಟಗಾರರ ಶ್ರಮ -ತ್ಯಾಗ
ಸಹ್ಯಾದ್ರಿ ಮಡಿಲಿನ ಮಲೆನಾಡು ಪ್ರಾಂತದ ವಿದ್ಯಾಕ್ಷೇತ್ರ.

# ರಾಷ್ಟ್ರೀಯ ಶಿಕ್ಷಣ ಸಮಿತಿ (ರಿ.)


ಬಾಲರಾಜ್ ಅರಸ್ ರಸ್ತೆ ಶಿವಮೊಗ್ಗ 577201

ಫೋನ್: 273469, 272178. ಫ್ಯಾಕ್ಸ್: 08182-222450

ವೆಬ್‌ಸೈಟ್:www.nes-shimoga.org www.jnnce.ac.in ಇ-ಮೈಲ್:nescec@sancharnet.in


| | | |
|---|---|---|
| 1. | ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಶಿವಮೊಗ್ಗ. | 1946 |
| 2. | ಕಸ್ತೂರಬಾ ಬಾಲಿಕಾ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಶಿವಮೊಗ್ಗ. | 1954 |
| 3. | ರಾಷ್ಟ್ರೀಯ ಹಿರಿಯ ಪ್ರಾಥಮಿಕ ಶಾಲೆ, ಶಿವಮೊಗ್ಗ. | 1956 |
| 4. | ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಕೋಣಂದೂರು. | 1960 |
| 5. | ರಾಷ್ಟ್ರೀಯ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಬಿ.ಆರ್. ಪ್ರಾಜೆಕ್ಟ್. | 1962 |
| 6. | ಜಯಪ್ರಕಾಶ್‌ನಾರಾಯಣ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಶಿವಮೊಗ್ಗ. | 1963 |
| 7. | ರಾಷ್ಟ್ರೀಯ ಶಿಕ್ಷಣ ಮಹಾವಿದ್ಯಾಲಯ, ಶಿವಮೊಗ್ಗ. | 1963 |
| 8. | ರಾಷ್ಟ್ರೀಯ ಪ್ರೌಢಶಾಲೆ, ಚೀಲೂರು. | 1964 |
| 9. | ರಾಷ್ಟ್ರೀಯ ಪ್ರೌಢಶಾಲೆ, ಕುಂಸಿ. | 1964 |
| 10. | ಶ್ರೀ ತೀರ್ಥಲಿಂಗೇಶ್ವರ ರಾಷ್ಟ್ರೀಯ ಪ್ರೌಢಶಾಲೆ, ಬೆಳಗುತ್ತಿ. | 1964 |
| 11. | ಶ್ರೀ ಪದ್ಮಾಂಬ ಪ್ರೌಢಶಾಲೆ, ಹುಂಚ. | 1964 |
| 12. | ಕಮಲಾ ನೆಹರು ಸ್ಮಾರಕ , ರಾಷ್ಟ್ರೀಯ ಕಲಾ, ವಾಣಿಜ್ಯ ಮತ್ತು ವಿಜ್ಞಾನ ಮಹಿಳಾ ಕಾಲೇಜು, ಶಿವಮೊಗ್ಗ. | 1965 |
| 13. | ಆಚಾರ್ಯ ತುಳಸಿ ರಾಷ್ಟ್ರೀಯ ವಾಣಿಜ್ಯ ಕಾಲೇಜು, ಶಿವಮೊಗ್ಗ. | 1966 |
| 14. | ರಾಷ್ಟ್ರೀಯ ಕಾನೂನು ಕಾಲೇಜು, ಶಿವಮೊಗ್ಗ. | 1966 |
| 15. | ರಾಷ್ಟ್ರೀಯ ಸಂಜೆ ವಾಣಿಜ್ಯ ಕಾಲೇಜು, ಶಿವಮೊಗ್ಗ. | 1968 |
| 16. | ರಾಷ್ಟ್ರೀಯ ಔಷಧ ಮಹಾವಿದ್ಯಾಲಯ, ಶಿವಮೊಗ್ಗ. | 1969 |
| 17. | ಶರಾವತಿ ರಾಷ್ಟ್ರೀಯ ಪ್ರೌಢಶಾಲೆ, ಹರಿಗೆ. | 1969 |
| 18. | ಶಾರದಾದೇವಿ ಬಾಲಿಕ ಪ್ರೌಢಶಾಲೆ , ಶಿವಮೊಗ್ಗ. | 1970 |
| 19. | ರಾಷ್ಟ್ರೀಯ ಪದವಿ ಪೂರ್ವ ಕಾಲೇಜು,ಶಿವಮೊಗ್ಗ. | 1972 |
| 20. | ಕಸ್ತೂರಬಾ ಬಾಲಿಕಾ ಪದವಿ ಪೂರ್ವ ಕಾಲೇಜು. ಶಿವಮೊಗ್ಗ. | 1972 |
| 21. | ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, ಕೋಣದೂಂರು. | 1972 |
| 22. | ಜವಾಹರಲಾಲ್‌ನೆಹರು ರಾಷ್ಟ್ರೀಯ ತಾಂತ್ರಿಕ ಮಹಾವಿದ್ಯಾಲಯ, ಶಿವಮೊಗ್ಗ. | 1980 |
| 23. | ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, ಬಿ.ಆರ್.ಪ್ರಾಜೆಕ್ಟ್. | 1983 |
| 24. | ಶರಾವತಿ ಪ್ರಥಮ ದರ್ಜೆ ಕಾಲೇಜು, ಕೋಣಂದೂರು. | 1983 |
| 25. | ರಾಷ್ಟ್ರೀಯ ಕಿರಿಯ ಪ್ರಾಥಮಿಕ ಶಾಲೆ, ಶಿವಮೊಗ್ಗ | 1983 |
| 26. | ಇಂಡಿಯನ್ ಪ್ರೌಢಶಾಲೆ, ಶಿವಮೊಗ್ಗ. | 1983 |
| 27. | ಜಯಪ್ರಕಾಶನಾರಾಯಣ ಪದವಿ ಪೂರ್ವ ಕಾಲೇಜು, ಶಿವಮೊಗ್ಗ. | 1984 |
| 28. | ಎಸ್.ಆರ್.ನಾಗಪ್ಪ ಶೆಟ್ಟಿ ಸ್ಮಾರಕ ರಾಷ್ಟ್ರೀಯ ಅನ್ವಯಿಕ ವಿಜ್ಞಾನ ಕಾಲೇಜು, ಶಿವಮೊಗ್ಗ. | 1991 |
| 29. | ಶ್ರೀ ತೀರ್ಥಲಿಂಗೇಶ್ವರ ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, ಬೆಳಗುತ್ತಿ. | 1994 |
| 30. | ಎನ್.ಇ.ಎಸ್. ಕಂಪ್ಯೂಟರ್ ಶಿಕ್ಷಣ ಕೇಂದ್ರ, ಶಿವಮೊಗ್ಗ. | 1998 |
| 31. | ರಾಷ್ಟ್ರೀಯ ಸ್ವತಂತ್ರ ವಸತಿ ವಿಜ್ಞಾನ ಕಾಲೇಜು, ಕೋಣಂದೂರು. | 2000 |



# ಗಾಂಧಿ ಮಹಾತ್ಮನು ದಾಂಡಿಗೆ ಹೊರಟರೆ ನಡುನಡುಗಿತು ಲಂಡನ್

ಡಾ. ಎಚ್. ಡಿ. ಚಂದ್ರಪ್ಪಗೌಡ



1946 (60) 2006



ವಜ್ರ ಮಹೋತ್ಸವ ವರ್ಷ

**ರಾಷ್ಟ್ರೀಯ ಶಿಕ್ಷಣ ಸಮಿತಿ**
ಬಾಲರಾಜ್ ಅರಸ್ ರಸ್ತೆ
ಶಿವಮೊಗ್ಗ - 577 201

" ಗಾಂಧಿ ಮಹಾತ್ಮನು ದಾಂಡಿಗೆ ಹೊರಟರೆ ನಡುನಡುಗಿತು ಲಂಡನ್ "
ಲೇಖಕರು : ಡಾ. ಎಚ್. ಡಿ. ಚಂದ್ರಪ್ಪಗೌಡ
ನಿವೃತ್ತ ಜಿಲ್ಲಾ ಸರ್ಜನ್, ಕುಪ್ಪಳಿ (ತೀರ್ಥಹಳ್ಳಿ ತಾಲ್ಲೂಕು), ಹಿರೇಕೊಡಿಗೆ-577 442
ಕೊಪ್ಪ, ಚಿಕ್ಕಮಗಳೂರು (ಕರ್ನಾಟಕ) ದೂರವಾಣಿ : 08265 - 230004
ಶಿವಮೊಗ್ಗ: ಮಿಷನ್ ಕಾಂಪೌಂಡು, ಶಿವಮೊಗ್ಗ - 577 201. ಫೋನ್ : 958182 - 223889

ಪ್ರಕಾಶಕರು : ರಾಷ್ಟ್ರೀಯ ಶಿಕ್ಷಣ ಸಮಿತಿ (ನೊಂ) ಶಿವಮೊಗ್ಗ



ಮೊದಲನೆಯ ಮುದ್ರಣ : 2006

ಪುಟಗಳು : 4 + 24

ಪ್ರತಿಗಳು : 1000

ಬೆಲೆ : 15/-

ಪ್ರತಿಗಳು ದೊರೆಯುವ ಸ್ಥಳ :
ರಾಷ್ಟ್ರೀಯ ಶಿಕ್ಷಣ ಸಮಿತಿ (ನೊಂ)
ಬಾಲರಾಜ ಅರಸ್ ರಸ್ತೆ, ಶಿವಮೊಗ್ಗ - 577 201

ಮುಖಪುಟ ವಿನ್ಯಾಸ: ರಾಮಧ್ಯಾನಿ
ಮೊಬೈಲ್ : 98440 82408

ಮುದ್ರಣ :
ನಾವಿಕ ಆಫ್‌ಸೆಟ್ ಮುದ್ರಣಾಲಯ
ಬಿ. ಹೆಚ್. ರಸ್ತೆ, ಶಿವಮೊಗ್ಗ.
ಫೋನ್ : 228557

# ಪರಿವಿಡಿ

# ಮುನ್ನುಡಿ

ಸುಮಾರು ೭೬ ವರ್ಷಗಳ ಹಿಂದಿನ ಮಾತು. ನನ್ನ ದೊಡ್ಡಪ್ಪನವರ ಜೊತೆ ಉಡುಪಿಗೆ ಹೋಗಿದ್ದೆ. ಗಾಂಧಿ ಟೋಪಿಗಳನ್ನು ಧರಿಸಿದ ಅನೇಕರು ಪುಟ್ಟ ಪುಟ್ಟ ಉಪ್ಪಿನ ಪೊಟ್ಟಣಗಳನ್ನು ಹರಾಜು ಹಾಕುತ್ತಿದ್ದರು. ಅಲ್ಲಿನ ಸಮುದ್ರ ತೀರದಲ್ಲಿ ತಯಾರಿಸಿದ ಉಪ್ಪಿನ ಪೊಟ್ಟಣಗಳು ಅವು. ಹರಾಜು ಹಾಕುವವರ ಮುಖಗಳಲ್ಲಿದ್ದ ಉತ್ಸಾಹ, ಕಳೆ ಇಂದಿಗೂ ಸ್ಮೃತಿಪಟಲದಲ್ಲಿ ಮಾಸದೇ ಉಳಿದಿದೆ. ನಾಲ್ಕಾಣೆಯಿಂದ (ಇಂದಿನ ಇಪ್ಪತ್ತೈದು ಪೈಸೆ) ನಾಲ್ಕು ನೂರು ರೂಪಾಯಿಗಳವರೆಗೆ ಆ ಪುಟ್ಟ ಪೊಟ್ಟಣಗಳು ಹರಾಜಾಗಿದ್ದು ನೆನಪಿದೆ. ನಾನೂ ಒಂದು ಪುಟ್ಟ ಪೊಟ್ಟಣವನ್ನು ಎರಡಾಣೆ (ಹನ್ನೆರಡು ಪೈಸೆ) ಕೊಟ್ಟು ಕೊಂಡುಕೊಂಡಿದ್ದೆ. ಇದಿಷ್ಟೇ 'ಉಪ್ಪಿನ ಸತ್ಯಾಗ್ರಹ' ಎನ್ನುವ ಆ ದೇಶವ್ಯಾಪಿ ಹೋರಾಟದಲ್ಲಿ ನನ್ನ ಸಕ್ರಿಯ ಪಾತ್ರ. ಆಗ ನನಗೆ ವಯಸ್ಸು ಹತ್ತು - ಹನ್ನೊಂದಿರಬಹುದು.

ಅಣ್ಣ ರಾಮಚಂದ್ರ (ಶ್ರೀ ಎನ್.ಆರ್.ಗಿರಿಮಾಜಿ) ತಾಯಿಯ ಜೊತೆ ಕೆಲ ಬಾರಿ ಎಲ್ಲರಿಗೂ ಕೇಳುವಂತೆ ಉತ್ಸಾಹ ಪೂರ್ಣವಾಗಿ ಮತ್ತೆ ಕೆಲ ಸಾರಿ ಕೆಳ ದನಿಯಲ್ಲಿ ಈ ಸತ್ಯಾಗ್ರಹದ ಬಗೆಗೆ ಮಾತನ್ನಾಡುತ್ತಿದ್ದದ್ದು ನನಗೆ ಚೆನ್ನಾಗಿ ನೆನಪಿದೆ.

' ಇದರಿಂದ ಏನೂ ಸಾಧನೆಯಾಗುವುದಿಲ್ಲ ಬಿಡಿ... ಇದೆಲ್ಲಾ ಬ್ರಿಟಿಷರ ಎದುರು ವ್ಯರ್ಥ ಪ್ರಯೋಗ. ಆ ಗಾಂಧೀಜಿಯ ಕಲ್ಪನೆಯ ಯೋಜನೆ ಅವರಿಗೇ ಅರ್ಥವಾಗಬೇಕು ' ಎನ್ನುವ ಮಾತುಗಳಿಂದ ಹಿಡಿದು 'ಲಂಡನ್ ಹೇಗೆ ನಡುಗಿತು ನೋಡಿ... ಗಾಂಧೀ ತಂತ್ರವೇ ಸರಿಯಾದ ತಂತ್ರ ' ಎನ್ನುವವರೆಗಿನ ವಿವಿಧ ಮಜಲಿನ ಮಾತುಗಳನ್ನು ಬೇರೆ ಬೇರೆ ಹಿರಿಯರ ಬಾಯಿಂದ ಕೇಳಿದ ನೆನಪಿದೆ. ಆಗ ವಯಸ್ಸು ಚಿಕ್ಕದಾಗಿದ್ದರೇನು ? ನಾವೂ ಕೆಲಬಾರಿ ಗಾಂಧೀಜಿಯವರ ಯೋಜನೆಗಳ ವಿರುದ್ಧ ನಂತರ ಕೆಲ ಸಾರಿ ಪರವಾಗಿ ವಾದ ಮಾಡುತ್ತಿದ್ದೆವು.

ಗಾಂಧೀಜಿಯವರ ಹೊಸ ಹೊಸ ಕಲ್ಪನೆಗಳನ್ನು ಈ ದೇಶದ ಜನರು ಮೊದಮೊದಲು ಸಂಶಯ ದೃಷ್ಟಿಯಿಂದಲೇ ನೋಡುತ್ತಿದ್ದು, ಒಂದೇ ಸಾರಿಗೆ ಒಪ್ಪಿಕೊಂಡಿಲ್ಲ ಎಂಬುದನ್ನು ನೆನಪಿಡಬೇಕು. ಗಾಂಧೀಜಿಯವರ ಅವಿಶ್ರಾಂತ ಕಾಯಕ, ಇಡೀ ದೇಶದಲ್ಲಿ ಅವರು ಮಾಡಿದ ಪ್ರವಾಸಗಳು, ಅವರು ಜನರನ್ನು ಅರಿತ ರೀತಿ, ಅವರು ಮಾಡಿದ ಕೆಲಸಗಳು, ಅವರ ಬಗೆಗಿದ್ದ ವಿಶ್ವಾಸವನ್ನು ದೃಢಗೊಳಿಸಿದವು. ದಾಂಡಿ ಯಾತ್ರೆಯ ಸಫಲತೆ ಗಾಂಧೀಜಿಯವರ ಬಗೆಗಿನ ವಿಶ್ವಾಸಾರ್ಹತೆಯನ್ನು ಹೆಚ್ಚಿಸಿದ ಘಟನೆಗಳಲ್ಲೊಂದು. ದಾಂಡಿ ಯಾತ್ರೆ ಎನ್ನುವ ಈ ರಾಷ್ಟ್ರೀಯ ಘಟನೆಯ ಹಿಂದಿದ್ದ ಸಂಘಟನೆ, ಅದಕ್ಕೆ ಗಾಂಧೀಜಿ ಮತ್ತು ಅವರ ಅನುಯಾಯಿಗಳು ಸುರಿಸಿದ್ದ ಬೆವರಿನಲ್ಲಿದ್ದ ಉಪ್ಪಿನ ಸತ್ಯಾಗ್ರಹದ ಸಮಯ ಸಿದ್ಧವಾದ ಉಪ್ಪಿಗಿಂತ ಲಕ್ಷ ಲಕ್ಷಗಟ್ಟಲೆ ಪಟ್ಟು ಹೆಚ್ಚಿನದ್ದು. ಸ್ವಾತಂತ್ರ್ಯ ಹೋರಾಟದ ಮುಂದಿನ ಹಂತಗಳಲ್ಲಿ ನಾವೂ ಭಾಗವಹಿಸಿದೆವು. ನಮಗೆ ಸಿಕ್ಕಿದ ಪಾತ್ರಗಳನ್ನು ಪ್ರಾಮಾಣಿಕವಾಗಿ ನಿರ್ವಹಿಸಿದೆವು. ಸಹಜತೆ, ಸರಳತೆ, ಶ್ರಮ ಜೀವನದ ಮೌಲ್ಯಗಳನ್ನು ನಾವು ಕಲಿತುಕೊಂಡದ್ದು ಗಾಂಧೀಜಿಯವರ ಜೀವನದಿಂದ.

ಓದುವುದು ಆಗ ನಾವು ಬೆಳೆಸಿಕೊಂಡ ಹವ್ಯಾಸಗಳಲ್ಲೊಂದು. ಮಿತ್ರ ಗೋಪಾಲ ಅಯ್ಯಂಗಾರ್ ಸಲಹೆಯಂತೆ ನಾನು ಮಹಾತ್ಮ ಗಾಂಧೀಜಿಯವರ ಆತ್ಮ ಚರಿತ್ರೆ ' '' ನನ್ನ ಸತ್ಯ ಶೋಧನೆಯ ಕಥೆ '' ನೆಹರೂರವರ ' Letters to Indira Priyadarshini ' Work, Wealth & Happiness of Mankind, Outline of World History, ಜಾನ್ ಗುಂಥರ್‌ರ Inside Asia, Inside Europe ಮುಂತಾದ ಪುಸ್ತಕಗಳನ್ನು ಓದಿದ್ದೆ. ನನ್ನ ವಿದ್ಯಾಭ್ಯಾಸ ಬಡತನದ ಕಾರಣದಿಂದ ಮಧ್ಯೆ ನಿಂತದ್ದರಿಂದ ನಾನು ಆ ಪುಸ್ತಕಗಳನ್ನು ಪೂರ್ಣವಾಗಿ ಅರ್ಥ ಮಾಡಿಕೊಂಡಿದ್ದೇನೆ ಎಂದು ಹೇಳಲಾಗದಿದ್ದರೂ ನನ್ನ ಜೀವನದ, ನನ್ನ ಚಿಂತನೆಯ ಕ್ರಮವನ್ನೇ ಈ ಪುಸ್ತಕಗಳು ಬದಲಿಸಿದವು ಎನ್ನುವುದು ಸತ್ಯ. ಈ ಎಲ್ಲಾ ಪುಸ್ತಕಗಳು ಮಾತೃಭಾಷೆಯಲ್ಲಿ ದೊರೆತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದು ಬಹಳ ಯೋಚಿಸಿದ್ದೇನೆ. ಸಾಹಿತ್ಯದ ಶಕ್ತಿ ಮನವರಿಕೆಯಾದ್ದರಿಂದಲೇ ಸಾಹಿತ್ಯದ ಬಗೆಗೆ, ಅದನ್ನು ರಚಿಸುವ ಸಾಹಿತಿಗಳ ಬಗೆಗೆ ನನಗೆ ಒಲವು, ಆದರ ಹಾಗೂ ಗೌರವ.

ಅಂತಹ ಗೌರವಕ್ಕೆ , ಪ್ರೀತಿಗೆ, ಪಾತ್ರರಾದವರಲ್ಲಿ ಡಾ. ಎಚ್.ಡಿ.ಚಂದ್ರಪ್ಪ ಗೌಡರೂ ಒಬ್ಬರು. ಅವರ ಅನೇಕ ವೈದ್ಯಕೀಯ ಲೇಖನಗಳನ್ನು ನಿಯತಕಾಲಿಕೆಗಳಲ್ಲಿ ಓದಿ ನನ್ನ ಜ್ಞಾನ ಹೆಚ್ಚಿಸಿಕೊಂಡಿದ್ದೇನೆ. ಅದು ನಮ್ಮವರೊಬ್ಬರ ಲೇಖನ ಎಂದು ಸಂತಸಪಟ್ಟಿದ್ದೇನೆ. ವಿಜ್ಞಾನದಂತಹ ವಿಷಯಗಳನ್ನೂ ಕನ್ನಡದಲ್ಲಿ ಬರೆಯಬಹುದು ಎಂದು ತೋರಿಸಿಕೊಟ್ಟವರಲ್ಲಿ ಜೆ.ಆರ್. ಲಕ್ಷ್ಮಣರಾಯರು, ಸೇತೂರಾಯರು, ಡಾ. ಶಿವಪ್ಪನವರಂತೆ ಡಾ. ಎಚ್.ಡಿ. ಚಂದ್ರಪ್ಪಗೌಡರೂ ಮೊದಲ ಸಾಲಿನಲ್ಲಿ ನಿಲ್ಲುತ್ತಾರೆ. ಚಂದ್ರಪ್ಪ ಗೌಡರು 'ಮೈಸೂರು ಚಲೋ ' ಮೊದಲಾದ ಚಳುವಳಿಯಲ್ಲಿ ಭಾಗವಹಿಸಿದವರು; ಸೆರೆವಾಸವನ್ನು ಅನುಭವಿಸಿದವರು; ಗಾಂಧೀಜಿಯವರ ತತ್ತ್ವಗಳನ್ನು ನಂಬಿ ಬದುಕಿನಲ್ಲಿ ಅಳವಡಿಸಿಕೊಂಡವರು. ಅವರ ಸಜ್ಜನಿಕೆ ಸರಳತೆ ಮತ್ತು ಬದ್ಧತೆ ನನ್ನನ್ನು ಗೆದ್ದಿವೆ

ರಾಷ್ಟ್ರೀಯ ಶಿಕ್ಷಣ ಸಮಿತಿಯ ಅಜೀವ ಸದಸ್ಯರಾದ ಅವರು ಸಮಿತಿಯಿಂದ ತಮಗೇನು ಲಾಭ ಎಂದು ಯಾವತ್ತೂ ಚಿಂತಿಸಿದವರಲ್ಲ. '' ನನ್ನಿಂದ ಸಮಿತಿಗೇನು ಲಾಭವಾಗಬೇಕು ? '' ಎಂದೇ ಚಿಂತಿಸಿದವರು ; ಆ ದಿಸೆಯಲ್ಲಿ ಕಾರ್ಯ ಪ್ರವೃತ್ತರಾದವರು. ಇದು ಅವರು ಸೇವೆ ಸಲ್ಲಿಸಿದ ಎಲ್ಲಾ ಸಾಮಾಜಿಕ ಸಂಘ ಸಂಸ್ಥೆಗಳ ಬಗೆಗೂ ಅವರು ಚಿಂತಿಸಿದ ರೀತಿ. ನೇರ ನುಡಿಯ ತತ್ವನಿಷ್ಠರಾದ ಡಾ. ಎಚ್.ಡಿ. ಚಂದ್ರಪ್ಪಗೌಡರು ರಾಷ್ಟ್ರೀಯ ಶಿಕ್ಷಣ ಸಮಿತಿಯ ಆಶ್ರಯದಲ್ಲಿ ನಡೆಯುವ ಎಲ್ಲಾ ಸಂಸ್ಥೆಗಳಲ್ಲಿ ಕೆಲಸ ಮಾಡುವ ವಿಜ್ಞಾನ ಮತ್ತು ತಂತ್ರಜ್ಞಾನ ಶಿಕ್ಷಕರನ್ನು ಕರೆದು ಅವರಿಂದ ವಿಜ್ಞಾನ ಲೇಖನಗಳನ್ನು ಬರೆಸುವ ಪ್ರಯತ್ನ ಮಾಡಿದ್ದು ನನಗೆ ನೆನಪಿದೆ; ಡಾ. ಚಂದ್ರಪ್ಪಗೌಡರ ಕನ್ನಡದ ಬಗೆಗಿನ ಕಳಕಳಿ ಅನನ್ಯವಾದದ್ದು.

ಹೋದ ವರ್ಷ ದಾಂಡಿ ಯಾತ್ರೆಗೆ ೭೫ ತುಂಬಿದ ಸಂದರ್ಭದಲ್ಲಿ ನಡೆದ ಆಚರಣೆ ನನ್ನಂತಹವರ ಮನಸ್ಸಿಗೆ ಕಸಿವಿಸಿ ಉಂಟು ಮಾಡಿದ್ದಂತೂ ಸತ್ಯ. ಆಗಿನ ಸಹಜತೆ, ಸರಳತೆಗೆ ವಿರುದ್ಧವಾದ ಆಡಂಬರ, ಡಂಭಾಚಾರದ, ದೊಂಬರಾಟ ಕಸಿವಿಸಿಯನ್ನು ಬಿಟ್ಟು ಇನ್ನೇನು ತರಬಲ್ಲದು ? ಕಾಲ ಬದಲಾಗಿದೆ. ಮೌಲ್ಯಗಳೂ ಬದಲಾಗಿವೆ. ಇದಕ್ಕಿಂತ ಬೇರೆ ಏನನ್ನೋ ನಿರೀಕ್ಷಿಸುವುದು ನಮ್ಮದೇ ತಪ್ಪು.

ಇಂತಹ ಸಂದರ್ಭದಲ್ಲಿ ಡಾ. ಚಂದ್ರಪ್ಪಗೌಡರ ಲೇಖನ ಓದಿ ನನಗೆ ಸಾಂತ್ವನವುಂಟಾಯಿತು ಎಂಬುದು ಅತಿಶಯೋಕ್ತಿಯಲ್ಲ. ಚಂದ್ರಪ್ಪಗೌಡರು ವೈದ್ಯ ವಿಜ್ಞಾನಿ. ಅವರು ಯಾವುದನ್ನೂ ಬಣ್ಣಕಟ್ಟಿ ಹೇಳುವುದಿಲ್ಲ. ಅವರ ಲೇಖನಗಳಲ್ಲಿ ಭಾವೋದ್ವೇಗವಿರುವುದಿಲ್ಲ. ಬದಲಿಗೆ ಸತ್ಯದ ವಸ್ತುನಿಷ್ಠ ನಿರೂಪಣೆ ಇರುತ್ತದೆ. ಅವರು ಜೇನಿನಂತೆ ವಿವಿಧ ಮೂಲಗಳಿಂದ ಮಕರಂದ ಸಂಗ್ರಹಿಸುತ್ತಾರೆ. ಅದನ್ನು ಮಧುವಾಗಿ ಪರಿವರ್ತಿಸುತ್ತಾರೆ. ಈ ಲೇಖನದಲ್ಲೂ ಅವರು ಭಾರತೀಯರ ದೃಷ್ಟಿಕೋನದಿಂದ ಮಾತ್ರ ದಾಂಡಿ ಯಾತ್ರೆಯನ್ನು ನೋಡದೇ ಅಮೆರಿಕನ್ನರು ಈ ಯಾತ್ರೆಯನ್ನು ಕಂಡ ರೀತಿಯನ್ನು ಮೂಲಾಧಾರವನ್ನೇ ಉದ್ಧರಿಸಿ ತಿಳಿಸುತ್ತಾರೆ. ಯಾವುದನ್ನೇ ಆಗಲಿ ತುಲನಾತ್ಮಕವಾಗಿ ನೋಡುವುದು ಒಂದು ಒಳ್ಳೆಯ ಅಭ್ಯಾಸ. ಒಂದು ಸುಂದರ ಹಾಸ್ಯಮಯ ಸಂಗತಿಯ (ಗಾಂಧೀಜಿಯವರು - ಇರ್ವಿನ್‌ರ ಜೊತೆಯಲ್ಲಿ ಟೀಗೆ ಉಪ್ಪು ಸೇರಿಸಿ ಕುಡಿದ ಪ್ರಸಂಗ) ಜೊತೆ ದಾಂಡಿ ಯಾತ್ರೆಯನ್ನು 'ಬೋಸ್ಟನ್ ಟೀ ಪಾರ್ಟಿ'ಗೆ ಹೋಲಿಸುತ್ತಾರೆ.

''ಗಾಂಧಿ ಮಹಾತ್ಮನು ದಾಂಡಿಗೆ ಹೊರಟರೆ ನಡುನಡುಗಿತು ಲಂಡನ್'' ಮೂಲಕ ಡಾ. ಚಂದ್ರಪ್ಪಗೌಡರು ದೇಶಕ್ಕೆ ಸ್ವಾತಂತ್ರ್ಯ ತಂದುಕೊಡಲು ಹೋರಾಡಿದ ಚೈತನ್ಯಗಳನ್ನು ಕೃತಜ್ಞತೆಯಿಂದ ಸ್ಮರಿಸಿದ್ದಾರೆ.

''ರಾಷ್ಟ್ರಪಿತ - ರಾಷ್ಟ್ರಪತಿ - ಜೋಗ ಜಲಪಾತ'' ಎರಡು ವಿಚಾರಗಳಿಂದ ನನಗೆ ಪ್ರಮುಖ ಎನಿಸುತ್ತವೆ. ಮೊದಲನೆಯದಾಗಿ ಅದು ಶಿವಮೊಗ್ಗೆಗೆ ಗಾಂಧೀಜಿಯವರ ಭೇಟಿಯ ಐತಿಹಾಸಿಕ ಘಟನೆಯನ್ನು ದಾಖಲು ಮಾಡುತ್ತದೆ. ೧೯೨೭ರಲ್ಲಿ ಗಾಂಧೀಜಿಯವರು ಇಲ್ಲಿಗೆ ಬಂದಿದ್ದರಂತೆ. ಈಗ ಗಾಂಧಿ ಪಾರ್ಕ್ (ಆಗ ಆ ಹೆಸರಿರಲಿಲ್ಲ) ಎನ್ನುವ ಜಾಗದಲ್ಲಿ ಸಭೆ ಸೇರಿದ್ದರಂತೆ. ಹೋಟೆಲ್ ಬೃಂದಾವನ (ಆಗ ನ್ಯಾಷನಲ್ ಲಾಡ್ಜ್)ದ ಎದುರು ತೆಂಗಿನ ಸಸಿ ನೆಟ್ಟಿದ್ದರಂತೆ.. ಎಂದು ನನ್ನ ವಯೋಮಾನದವರೂ (೮೬ ವರ್ಷ) ಕೂಡಾ... ಅಂತೆ ಸೇರಿಸಿ ಹೇಳಬೇಕಾದ ವಿಷಯಗಳು; ಪತ್ರಿಕಾ ಮಾಧ್ಯಮದಲ್ಲಿ ದಾಖಲಾಗಬಹುದು ; ಇಲ್ಲವೆ ಮರೆತೇ ಹೋಗಿ ಬಿಡಬಹುದಾದ ಇಂತಹ ಸಂಗತಿಗಳಿಗೆ ಮುದ್ರಣ ಶಾಶ್ವತತೆ ತಂದುಕೊಡುತ್ತವೆ. ಆ ಸಂದರ್ಭದಲ್ಲಿ ನ್ಯಾಯವಾದಿ ಶ್ರೀ ವೆಂಕಟ ಸುಬ್ಬಾಶಾಸ್ತ್ರಿಗಳ ಕಾರಿನಲ್ಲಿ ತೀರ್ಥಹಳ್ಳಿಗೆ ಪ್ರಯಾಣ ಮಾಡಿದ ಮಹಾತ್ಮರು ನಂತರ ತಮ್ಮ ಕೃತಜ್ಞತೆಗಳನ್ನು ಅವರ ಮನೆಗೇ ಹೋಗಿ ಸೂಚಿಸಿದ್ದನ್ನು ಆತ್ಮೀಯರಾದ ಶ್ರೀ ವೆಂಕಟರಾಮ ಶಾಸ್ತ್ರಿಗಳು ನಮಗೆ ತಿಳಿಸಿದ್ದಿದೆ. ಈ ರೀತಿಯಲ್ಲಿ ಮಹಾತ್ಮರನ್ನು ಆ ಮಟ್ಟಕ್ಕೆ ಬೆಳೆಸಿದ ಪುಟ್ಟಪುಟ್ಟ ಘಟನೆಗಳು ಈ ತರಹದ ಲೇಖನಗಳ ಮೂಲಕ ಮುಂದಿನ ಪೀಳಿಗೆಗೆ ಮಾರ್ಗದರ್ಶಿಗಳಾಗಿ ನಿಲ್ಲುತ್ತವೆ.

ಎರಡನೆಯದಾಗಿ ಈ ಲೇಖನ ಗಾಂಧೀಜಿಯವರ ಚಿಂತನೆ ಮತ್ತು ಸ್ವಾತಂತ್ರ್ಯೋತ್ತರ ಮುಖಂಡರ ಚಿಂತನೆಯಲ್ಲಿರುವ ಅಜಗಜಾಂತರ ವ್ಯತ್ಯಾಸವನ್ನು ಕಣ್ಣಿಗೆ ಕಟ್ಟುವಂತೆ ವಿವರಿಸುತ್ತದೆ.

ಸ್ವಂತ ಸುಖ ಮರೆತು ದೇಶದ ಹಿತಕ್ಕಾಗಿ ತನ್ನ ಕಾಲವೆಲ್ಲವನ್ನೂ ಮೀಸಲಿಟ್ಟ ಕಾಲ್ನಡಿಗೆಯ ಆ ಮಹಾ ದಾರ್ಶನಿಕನೆಲ್ಲಿ? ದೇಶದ ಹಿತವನ್ನೇ ಸ್ವಂತ ಸುಖಕ್ಕಾಗಿ ಬಲಿಕೊಡುವ ಇಂದಿನ

ಮುಖಂಡರುಗಳೆಲ್ಲಿ? ಕಟುವಾದ ಸತ್ಯವೊಂದನ್ನು ಈ ಲೇಖನ ನಮ್ಮೆದುರು ತೆರೆದಿಡುತ್ತದೆ. ಡಾ. ಚಂದ್ರಪ್ಪಗೌಡರು ಹೆಸರಾಂತ ಸರ್ಜನ್. ರಾಷ್ಟ್ರಪಿತನ ಮತ್ತು ರಾಷ್ಟ್ರಪತಿಯ ದೃಷ್ಟಿ-ಕೋನದಂತಹ ಎರಡು ಕಸಿ ಮಾಡಲಾಗದ ವಿಷಮ ಸಂಗತಿಗಳನ್ನು ಒಟ್ಟಿಗೆ ವಿಷಾದದ ದಾರದಿಂದ ಹೊಲಿದುಬಿಡುತ್ತಾರೆ. ಲೇಖನ ನೋವಿನ ಛಾಯೆ ಉಳಿಸುವುದರಲ್ಲಿ ಸಮರ್ಥವಾಗುತ್ತದೆ. ಲೇಖಕರಾಗಿ ಡಾಕ್ಟರ್ ಸಫಲರಾಗುತ್ತಾರೆ.

ಈ ಎರಡು ಲೇಖನಗಳನ್ನು ಕಿರುಹೊತ್ತಿಗೆಯಾಗಿ ತರಬೇಕೆಂದು ನಾವು ಬಯಸಿದಾಗ ಸಂಪೂರ್ಣ ಸಹಕಾರ ಕೊಟ್ಟಿದ್ದಾರೆ, ನಮ್ಮವರೇ ಆದ ಆತ್ಮೀಯ ಡಾ. ಚಂದ್ರಪ್ಪಗೌಡರು. ನನ್ನನ್ನು ಮುನ್ನುಡಿ ಬರೆಯಬೇಕೆಂದು ಕೇಳಿಕೊಂಡಿದ್ದಾರೆ. ಮುನ್ನುಡಿಯಲ್ಲಿ ದೇಶದ ಬಗೆಗಿನ, ಕನ್ನಡದ ಬಗೆಗಿನ, ಡಾ. ಚಂದ್ರಪ್ಪಗೌಡರ ಬಗೆಗಿನ ನನ್ನ ಅಭಿಮಾನವನ್ನು ಓದುಗರು ಅರ್ಥಮಾಡಿಕೊಂಡರೆ ಸಾಕು.

ರಾಷ್ಟ್ರೀಯ ಶಿಕ್ಷಣ ಸಮಿತಿಯ 'ವಜ್ರ ಮಹೋತ್ಸವ' ವರ್ಷದಲ್ಲಿ ಈ ಕಿರು ಹೊತ್ತಿಗೆ ಪ್ರಕಟವಾಗುತ್ತಿರುವುದು ಸಂತಸದ ವಿಷಯ. ಸಮಯಕ್ಕೆ ಸರಿಯಾಗಿ ಮುಖಪುಟ ವಿನ್ಯಾಸ ಮಾಡಿಕೊಟ್ಟ ರಾಮಧ್ಯಾನಿಯವರನ್ನೂ, ಪುಸ್ತಿಕೆಯನ್ನು ಅಂದವಾಗಿ ಮುದ್ರಿಸಿಕೊಟ್ಟ ನಾವಿಕ ಬಳಗವನ್ನೂ ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ನಮನಗಳು.

**- ಗಿರಿಮಾಜಿ ಎನ್. ರಾಜಗೋಪಾಲ್**



ಮಹಾತ್ಮ ಗಾಂಧಿ ಮತ್ತು ಕಸ್ತೂರಿ ಬಾರವರು ನೆಟ್ಟ ತೆಂಗಿನಮರಗಳು ನ್ಯಾಷನಲ್ ಲಾಡ್ಜ್ (ಇಂದಿನ ಬೃಂದಾವನ ಲಾಡ್ಜ್), ಶಿವಮೊಗ್ಗ

# ಅರಿಕೆ

ಎರಡು ವರ್ಷಗಳ ಹಿಂದೆ ಅಮೆರಿಕೆಯಲ್ಲಿದ್ದ ನನ್ನ ಮಗನ ಸಂಸಾರದ ಜೊತೆ ಸ್ವಲ್ಪ ಸಮಯ ಇರುವ ಅವಕಾಶ ಒದಗಿ ಬಂದಿತ್ತು. ನಾವಿದ್ದ ವಿಲ್ಮಿಂಗ್‌ಟನ್ ನಗರದ (ಡೆಲವೇರ್ ಪ್ರಾಂತ್ಯ) ಗ್ರಂಥಾಲಯಕ್ಕೆ ಆಗಾಗ್ಗೆ ಭೇಟಿ ನೀಡುತ್ತಿದ್ದೆ. ವೈದ್ಯಕೀಯ ಸಾಹಿತ್ಯದ ಕೃತಿಗಳತ್ತ ಆಸಕ್ತಿಯಿದ್ದರೂ ಭಾರತ, ಅದರಲ್ಲೂ ಗಾಂಧಿ, ನೆಹರು ಮುಂತಾದ ನಮ್ಮ ನೇತಾರರ ಕುರಿತು ವಿದೇಶೀಯರು ರಚಿಸಿದ ಪುಸ್ತಕಗಳ ಹುಡುಕಾಟವೂ ನಡೆಯುತ್ತಿತ್ತು. ಮಹಾತ್ಮಗಾಂಧಿಯವರ ಕೆಲವು ಕೃತಿಗಳಲ್ಲಿ '' ಉಪ್ಪಿನ ಸತ್ಯಾಗ್ರಹ '' (ದಾಂಡಿಯಾತ್ರೆ) ಕುರಿತ ಪ್ರತ್ಯಕ್ಷ ವರದಿಗಳು ನನ್ನ ತೀವ್ರಗಮನ ಸೆಳೆಯುತ್ತಿದ್ದವು. ಬಹುಶಃ ಸ್ವದೇಶದಲ್ಲಿ ದಾಖಲಾಗಿರದಂತಹ ಕೆಲವು ವರದಿಗಳು ಅಚ್ಚರಿ ಮೂಡಿಸುವಂತಿದ್ದವು; ವಿದೇಶಿಯರು ಆ ಘಟನೆಯ ಕುರಿತು ನೀಡಿದ ನೈಜ ಚಿತ್ರಣ ನನ್ನ ಅಂತರಾಳವನ್ನು ಕೆದಕಿದವೆಂದೇ ಹೇಳಬೇಕು. ಅವುಗಳನ್ನು ಸಂಗ್ರಹಿಸಿ ಟಿಪ್ಪಣಿ ಮಾಡಿಕೊಂಡೆ; ಅಲ್ಲಿರುವಾಗಲೇ ಒಂದು ಸುದೀರ್ಘ ಲೇಖನವನ್ನೂ ತಯಾರಿಸಿದೆ.

ಭಾರತಕ್ಕೆ ಹಿಂದಿರುಗಿದ ನಂತರ ಆ ಲೇಖನವನ್ನು ಕನ್ನಡದ ಕೆಲವು ನಿಯತಕಾಲಿಕ ಪತ್ರಿಕೆಗಳಿಗೆ ಪ್ರಕಟಿಸುವ ಪ್ರಯತ್ನ ಮಾಡಿದೆ. ಲೇಖನ ಸ್ವಲ್ಪ ದೀರ್ಘವಾಗಿದ್ದರಿಂದಲೋ ಏನೋ ಮೊದಲಿಗೆ ಉತ್ತೇಜನ ದೊರೆಯಲಿಲ್ಲ. ಅಂತಿಮವಾಗಿ ಧಾರವಾಡದ 'ಸಂಯುಕ್ತ ಕರ್ನಾಟಕ' ದಿನ ಪತ್ರಿಕೆ ೨೦೦೪ರ ಗಣರಾಜ್ಯ ದಿನದ ಸಂದರ್ಭಕ್ಕಾಗಿ ಎರಡು ಕಂತುಗಳಲ್ಲಿ ಪ್ರಕಟಿಸಿತು. ಈ ಹಿನ್ನೆಲೆಯಲ್ಲಿ ಕಳೆದ ವರ್ಷ ಐತಿಹಾಸಿಕ 'ದಾಂಡಿಯಾತ್ರೆ' ಯ ೭೫ನೇ ವರ್ಷಾಚರಣೆಯನ್ನು ನಮ್ಮ ಸರ್ಕಾರಗಳೇ ಅಲ್ಲದೆ ಜನ ಸಮುದಾಯದವರು ಆಚರಿಸಿದ ರೀತಿ-ನೀತಿಗಳು, ಅದರ ಅಣಕವಾಡುವಿನಂತೆ ಜರುಗಿದ್ದು ನನ್ನಲ್ಲಿ ಜಿಗುಪ್ಸೆಯುಂಟುಮಾಡಿತು; ಆದರೆ ನಾನೇನೂ ಮಾಡದ ಮೂಕ ಪ್ರೇಕ್ಷಕನಾಗುವಂತಾಯಿತು.

ಇತ್ತೀಚೆಗೆ ಶಿವಮೊಗ್ಗೆಯ ಹಿರಿಯ ಸ್ವಾತಂತ್ರ್ಯ ಹೋರಾಟಗಾರರೂ, ಪ್ರತಿಷ್ಠಿತ ರಾಷ್ಟ್ರೀಯ ಶಿಕ್ಷಣ ಸಮಿತಿಯ ಕಾರ್ಯದರ್ಶಿಗಳೂ ಆದ ಶ್ರೀಯುತ ಗಿರಿಮಾಜಿ ಎನ್. ರಾಜಗೋಪಾಲ್ ಅವರ ಆರೋಗ್ಯದ ಬಗ್ಗೆ ವಿಚಾರಿಸಲು ಅವರಲ್ಲಿಗೆ ಹೋಗಿದ್ದೆ. ದಾಂಡಿಯಾತ್ರೆ ಕುರಿತ ನನ್ನ ಬರಹ ಅವರಂತಹ ಹಿರಿಯ ಸ್ವಾತಂತ್ರ್ಯ ಸೇನಾನಿಗೆ ಇಷ್ಟವಾಗಬಹುದೆಂದು ಅದರ ಪ್ರತಿಯೊಂದನ್ನು ನೀಡಿದೆ. ಒಡನೆಯೇ ತದೇಕಚಿತ್ತದಿಂದ ಅದರ ಮೇಲೆ ಕಣ್ಣಾಡಿಸತೊಡಗಿದರು. ಅದರ ಅವಲೋಕನ ಮುಗಿಸಿ ತಲೆಯೆತ್ತಿದ ನಂತರ ಮುಗುಳ್ನಕ್ಕು ಅದನ್ನು ತಮ್ಮ ರಾ. ಶಿ. ಸಮಿತಿಯ ವತಿಯಿಂದ ಒಂದು ಕಿರುಪುಸ್ತಕ ರೂಪದಲ್ಲಿ ಪ್ರಕಟಿಸುವ ನಿರ್ಧಾರವನ್ನು ಪ್ರಕಟಿಸಿಯೇ ಬಿಟ್ಟರು. ಬಹುಶಃ ಬಾಲ್ಯದಲ್ಲಿ ದಾಂಡಿಯಾತ್ರೆಯ ಬಗೆಗೆ ಅವರಿಗುಂಟಾಗಿದ್ದ ಅನುಭವ ಆ ನಿರ್ಧಾರಕ್ಕೆ ಪ್ರೇರಣೆಯಾಗಿರಬಹುದೆನಿಸಿತು. ಮೂಕವಿಸ್ಮಿತನಾದ ನಾನು ಇನ್ನೇನು ಹೇಳಲು ಸಾಧ್ಯ?

ಗಾಂಧೀಜಿಯವರು ೧೯೩೭ರಲ್ಲಿ ಶಿವಮೊಗ್ಗೆಯಲ್ಲಿ ಕೆಲ ದಿನಗಳು ತಂಗಿದ್ದ ಸಮಯದಲ್ಲಿ ಜರುಗಿದ ಘಟನೆಯನ್ನು ಕುರಿತು ೧೯೯೦ರಲ್ಲಿ ನಾನು ಪ್ರಕಟಿಸಿದ ಲೇಖನದ ನೆನಪು ಕೆಲ ದಿನಗಳಾದ ಮೇಲೆ ಮರುಕಳಿಸಿತು. ಆ ಲೇಖನವನ್ನು ನನ್ನ ವೈದ್ಯ ಮಿತ್ರ ಡಾ. ಎಚ್. ಸಿ. ವಿಷ್ಣುಮೂರ್ತಿಯವರು ' ರಾಷ್ಟ್ರಪಿತ – ರಾಷ್ಟ್ರಪತಿ – ಜೋಗ ಜಲಪಾತ' ಎಂಬ ತಲೆ ಬರಹದಲ್ಲಿ ತಮ್ಮ 'ಸಂಜೆ ಸಮಾಚಾರ' ಪತ್ರಿಕೆಯಲ್ಲಿ ಪ್ರಕಟಿಸಿದ್ದರು. ಆ ಲೇಖನ ಮಹಾತ್ಮರ ಸರಳ ವ್ಯಕ್ತಿತ್ವ, ಹಾಗೂ ಪರಕೀಯರ ದಾಸ್ಯದಿಂದ ಮಾತೃಭೂಮಿಯ ಬಿಡುಗಡೆಗಾಗಿ ಅವರು ಸಾರಿದ್ದ 'ಸತ್ಯಾಗ್ರಹ ಸಮರ' ಬಗೆಗಿನ ನಿಷ್ಠೆಯ ಪ್ರತೀಕವಾಗಿತ್ತು. ಅವರ ತತ್ವ ಮತ್ತು ಉದ್ದೇಶಗಳನ್ನು ನಾವೀಗ ಗಾಳಿಗೆ ತೂರಿ ನಡೆದುಕೊಳ್ಳುತ್ತಿರುವುದಕ್ಕೆ ಹಿಡಿದ ಕೈಗನ್ನಡಿಯಂತಿತ್ತು. ಆ ಲೇಖನವನ್ನು ಸಹ ಶ್ರೀ ಗಿರಿಮಾಜಿಯವರಿಗೆ ತಲುಪಿಸಿದೆ. ಅದನ್ನೂ ಸಹ 'ಗಾಂಧಿ ಮಹಾತ್ಮನು ದಾಂಡಿಗೆ ಹೊರಟರೆ....' ಲೇಖನದ ಜೊತೆಗೆ ಪ್ರಕಟ ಮಾಡುವ ನಿರ್ಧಾರವೂ ಆಯಿತಂತೆ. ಹಾಗಾಗಿ ನನ್ನ ಕಡತಗಳಲ್ಲಿ ಅಡಗಿ ಕುಳಿತು, ಮರೆತೇ ಹೋಗಿದ್ದ ವಿಚಾರಗಳು ಮತ್ತೆ ಬೆಳಕಿಗೆ ಬರುವಂತಾದದ್ದು ನನ್ನ ಮನಸ್ಸಿಗೆ ಸಂತಸ ಉಂಟುಮಾಡಿದೆ.

ನನ್ನ ಈ ಬರವಣಿಗೆಗಳಲ್ಲಿ ಆಸಕ್ತಿ ವಹಿಸಿ ಅವುಗಳನ್ನು ಪುಸ್ತಿಕೆ ರೂಪದಲ್ಲಿ ಪ್ರಕಟಿಸಲು ಮುಂದೆ ಬಂದಿರುವ ರಾಷ್ಟ್ರೀಯ ಶಿಕ್ಷಣ ಸಮಿತಿ ಹಾಗೂ ಅದರ ಅಧ್ಯಕ್ಷರು, ಕಾರ್ಯದರ್ಶಿ ಶ್ರೀ ಗಿರಿಮಾಜಿ ಎನ್. ರಾಜಗೋಪಾಲ್, ಸಹ ಕಾರ್ಯದರ್ಶಿ ಶ್ರೀ ಎಸ್. ವಿ. ತಿಮ್ಮಯ್ಯ ಮತ್ತು ಇತರ ಎಲ್ಲಾ ಪದಾಧಿಕಾರಿಗಳಿಗೆ ತುಂಬಾ ಆಭಾರಿಯಾಗಿರುವೆ. ಅಲ್ಲದೆ ಈ ಲೇಖನಗಳನ್ನು ಹಿಂದೆ ಪ್ರಕಟಿಸಿದ ' ಸಂಜೆ ಸಮಾಚಾರ ' ಮತ್ತು ' ಸಂಯುಕ್ತ ಕರ್ನಾಟಕ ' ಪತ್ರಿಕಾ ಸಂಪಾದಕರುಗಳಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ನಮ್ಮ ಸ್ವಾತಂತ್ರ್ಯ ಸಂಗ್ರಾಮದ ರೋಚಕ ಘಟನೆಗಳು ದೇಶ ಬಾಂಧವರ ಗಮನ ಸೆಳೆಯುವಂತಾದರೆ ನನ್ನ ಪ್ರಯತ್ನ ಸಾರ್ಥಕವೆಂದುಕೊಳ್ಳುತ್ತೇನೆ.

**– ಎಚ್. ಡಿ. ಚಂದ್ರಪ್ಪಗೌಡ**

# ೧ ಗಾಂಧಿ ಮಹಾತ್ಮನು ದಾಂಡಿಗೆ ಹೊರಟರೆ ನಡು ನಡುಗಿತು ಲಂಡನ್

ನಮ್ಮ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಮಹಾತ್ಮಾ ಗಾಂಧಿಯವರು ೧೯೩೦ರಲ್ಲಿ ಕೈಗೊಂಡ ''ದಾಂಡಿಯಾತ್ರೆ'' ಗೆ ಹೆಚ್ಚಿನ ಮಹತ್ವವಿದೆ. ಒಂದು ರೀತಿಯಲ್ಲಿ ಸಂಗ್ರಾಮ ಮುಂದುವರಿಯಲು ಸ್ಪಷ್ಟ ಮಾರ್ಗಸೂಚಿಯನ್ನು ಅದು ನೀಡಿತೆನ್ನಬಹುದು. ಲೇಖನದ ತಲೆಬರಹ ಇಂದಿನ ಜನಾಂಗದವರಲ್ಲಿ ಅಚ್ಚರಿಯುಂಟುಮಾಡದಿರಲಾರದು. ಆದರೆ ಸುಮಾರು ಮುಕ್ಕಾಲು ಶತಮಾನದ ಹಿಂದೆ ನಾವು ವಿದ್ಯಾರ್ಥಿಗಳು ಎದೆ ಮುಂದು ಮಾಡಿ, ತಲೆ ಎತ್ತಿ, ಆ ಹಾಡನ್ನು ಘೋಷಿಸುತ್ತಿದ್ದಾಗ, ಮೈ ನವಿರೇಳುತ್ತಿತ್ತು. ಅದರ ಪ್ರತಿಫಲ ಆ ಮುಂದಿನ ಹತ್ತಾರು ವರ್ಷಗಳಲ್ಲಿ ಲಭಿಸಿತ್ತಷ್ಟೆ. ಹಿಂದಿರುಗಿ ನೋಡಿದಾಗಲೇ ಅಂತಹ ಸರಳ ಕಾಲ್ನಡಿಗೆಯ ಮಹತ್ವ ಸಂಪೂರ್ಣವಾಗಿ ಅರಿವಾದದ್ದು.

ಕಳೆದ ಶತಮಾನದ ಆದಿಯಲ್ಲಿ ಗುಜರಾತಿನ ವಕೀಲ ಮೋಹನದಾಸ ಕರಮಚಂದ ಗಾಂಧಿ ದಕ್ಷಿಣ ಆಫ್ರಿಕಾದಲ್ಲಿನ ಭಾರತೀಯರ ಹಕ್ಕುಗಳ ಪರವಾಗಿ ಬ್ರಿಟಿಷರ ವಿರುದ್ಧ ಅಹಿಂಸಾತ್ಮಾಕ ಹೋರಾಟ ನಡೆಸಿದ್ದು, ಅವರಿಗೆ ಪ್ರಪಂಚದಾದ್ಯಂತ ಖ್ಯಾತಿ ತಂದಿತ್ತು. ಗಾಂಧೀಜಿಯವರು ೧೯೧೫ರಲ್ಲಿ ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಹಿಂದಿರುಗುವ ಸಮಯಕ್ಕೆ, ಅದಾಗಲೇ ಬ್ರಿಟಿಷರು ನಮ್ಮ ದೇಶವನ್ನು ಆಕ್ರಮಿಸಿಕೊಂಡು ಸುಮಾರು ಎರಡು ಶತಮಾನಗಳೇ ಉರುಳಿದ್ದವು. ಅವರ ದುರಾಡಳಿತ, ದಬ್ಬಾಳಿಕೆ ಹಾಗೂ ಸಂಪನ್ಮೂಲಗಳ ದೋಚುವಿಕೆಯಿಂದ ಭಾರತೀಯರು ತತ್ತರಿಸಿ ಹೋಗಿದ್ದರು. ದಾಸ್ಯ ವಿಮೋಚನೆಗಾಗಿ ೧೮೫೭ರಲ್ಲಿ ಜರುಗಿದ ಮೊದಲ ಸ್ವಾತಂತ್ರ್ಯ ಸಮರವೇ (ಸಿಪಾಯಿ ದಂಗೆ) ಅಲ್ಲದೆ ಆಗಿಂದಾಗ್ಗೆ ದೇಶದ ವಿವಿಧ ಕಡೆ ಆಂದೋಳನಗಳು ಜರುಗುತ್ತಲೇ ಇದ್ದವು. ಇಪ್ಪತ್ತನೇ ಶತಮಾನದ ಆದಿಯಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಈ ದಿಸೆಯಲ್ಲಿ ಕಾರ್ಯೋನ್ಮುಖವಾಗಿತ್ತು. ಆದರೂ ವಿವಿಧ ಮುಖಂಡರು, ಪಕ್ಷಗಳ ನಡುವೆ ಸಾಮರಸ್ಯ ಹಾಗೂ ಸ್ಪಷ್ಟ ಗುರಿಯತ್ತ ಯಾವುದೇ ಒಮ್ಮತವಿರದೆ ಹೋರಾಟಗಳು ಯಶಸ್ವಿಯಾಗುತ್ತಿರಲಿಲ್ಲ. ದಕ್ಷಿಣ ಆಫ್ರಿಕಾದಲ್ಲಿ ಗಾಂಧಿಯವರು ಅಹಿಂಸಾತ್ಮಕ, ಅಸಹಕಾರ ಚಳವಳಿಗಳ ಯಶಸ್ಸಿನಿಂದ ಭಾರತಕ್ಕೆ ಹಿಂದಿರುಗಿದ್ದು, ಒಂದು ಸುದೈವವೆಂದೇ ಹೇಳಬೇಕು. ಅವರು ಮೊದಲಿಗೆ ಭಾರತಾದ್ಯಂತ ಸಂಚರಿಸಿ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡರು. ಅದಾಗಲೇ ಮೊದಲ ಮಹಾಯುದ್ಧ ಆರಂಭವಾಗಿದ್ದರಿಂದ ತಕ್ಷಣ ಏನನ್ನೂ ಸಾಧಿಸಲಾಗಲಿಲ್ಲ. ಆದರೂ ಗಾಂಧೀಜಿಯವರ ನೇತೃತ್ವದಲ್ಲಿ ಕಾಂಗ್ರೆಸ್ ಬ್ರಿಟಿಷರ ಹತ್ತಿರ ಸಂಧಾನ ಮಾಡಿ, ಯುದ್ಧಾನಂತರ ಭಾರತೀಯರಿಗೆ ಸ್ವಯಂ ಆಡಳಿತದ ಅಧಿಕಾರ ನೀಡುವ ಭರವಸೆ ಪಡೆಯಲು ಸಾಧ್ಯವಾಗಿತ್ತು. ಆ ಷರತ್ತಿನಂತೆ ಅಂದಿನ ಮಹಾಯುದ್ಧದಲ್ಲಿ ಭಾರತೀಯರು ಬ್ರಿಟಿಷರಿಗೆ ಸಂಪೂರ್ಣ ಸಹಕಾರ ನೀಡಿದರು.

ಯುದ್ಧದಲ್ಲಿ ಬ್ರಿಟಿಷರು ಜಯ ಗಳಿಸಿದರೂ, ಭಾರತಕ್ಕೆ ಸ್ವಯಂ ಆಡಳಿತ ನೀಡುವ ಭರವಸೆಯನ್ನು ಈಡೇರಿಸಲಿಲ್ಲ. ಈ ಬಗೆಗೆ ಜನತೆ ಆಂದೋಳನ ನಡೆಸಿದಾಗ ಇಲ್ಲಿಯ ವಿದ್ಯಮಾನಗಳ ಬಗೆಗೆ ಅಧ್ಯಯನ ಮಾಡಿ ಸಲಹೆ ಮಾಡಲು ರೌಲತ್ ಎಂಬ ಉನ್ನತಾಧಿಕಾರಿಯನ್ನು ಕಳುಹಿಸಿದರು. ಆ ಮಹಾನುಭಾವ ತನ್ನ ವರದಿಯಲ್ಲಿ ಬ್ರಿಟಿಷ್ ಆಡಳಿತವನ್ನು ಇನ್ನೂ ಬಿಗಿಗೊಳಿಸಲು ಕ್ರೂರ ವಿಧಿ ವಿಧಾನಗಳನ್ನು ಶಿಫಾರಸ್ಸು ಮಾಡಿದನಂತೆ. ಅದು ರೌಲತ್ ಕಾಯಿದೆಯಾಗಿ ಜಾರಿಯಾಯಿತು. ಗಾಂಧಿ ಮತ್ತು ಕಾಂಗ್ರೆಸ್‌ನ ಆಂದೋಳನಗಳು ಮುಂದುವರಿಯುತ್ತಿದ್ದರೂ ಹೆಚ್ಚಿನ ಯಶಸ್ಸು ಸಿಗುತ್ತಿರಲಿಲ್ಲ. ದುರಾಡಳಿತದ ಜೊತೆಗೆ ಇಲ್ಲಿಯ ಕಚ್ಚಾ ಸಾಮಾಗ್ರಿಗಳು ಮತ್ತಿತರ ಸಾಧನ ಸಂಪತ್ತುಗಳೆಲ್ಲಾ ಇಂಗ್ಲೆಂಡಿಗೆ ಸರಬರಾಜಾಗುವುದು ಮುಂದುವರಿಯುತ್ತಲೇ ಇತ್ತು. ಜನ ಸಾಮಾನ್ಯರ ಅತ್ಯಾವಶ್ಯಕ ವಸ್ತುವಾದ ಉಪ್ಪನ್ನು ತಯಾರಿಸುವುದಕ್ಕೂ ಭಾರತೀಯರಿಗೆ ಬಿಡುತ್ತಿರಲಿಲ್ಲ. ಸರ್ಕಾರ ತಯಾರಿಸಿದ ಉಪ್ಪಿಗೆ ತೆರಿಗೆ ಕೊಡಬೇಕಾದ ನಿಯಮ ಬೇರೆ. ಇದೊಂದು ಸಾಮಾನ್ಯ ಉದಾಹರಣೆ, ಅಷ್ಟೇ. ಮಿಕ್ಕೆಲ್ಲಾ ವಸ್ತುಗಳದ್ದೂ ಇದೇ ಪಾಡಾಗಿ ಜನ ಜೀವನ ನಡೆಸುವುದು ದುಸ್ತರವಾಗಿತ್ತು. ಪ್ರತಿ ವರ್ಷ ಜರುಗುತ್ತಿದ್ದ ಕಾಂಗ್ರೆಸ್ ಅಧಿವೇಶನಗಳಲ್ಲಿ ಈ ಬಗೆಗೆ ಠರಾವುಗಳಾಗುತ್ತಿದ್ದು ಆಂದೋಳನಗಳಾಗುತ್ತಿದ್ದರೂ, ಬ್ರಿಟಿಷ್ ಆಳರಸರು ತಮ್ಮ ಕಪಿ ಮುಷ್ಟಿಯನ್ನು ಸಡಲಿಸುತ್ತಿರಲಿಲ್ಲ. ಅಂತಿಮವಾಗಿ ೧೯೨೯ರ ಡಿಸೆಂಬರ್ ಅಂತ್ಯದಲ್ಲಿ ಲಾಹೋರ್‌ನಲ್ಲಿ ಜವಹರಲಾಲ್ ನೆಹರು ಅವರ ಅಧ್ಯಕ್ಷತೆಯಲ್ಲಿ ಸಮಾವೇಶಗೊಂಡ ಕಾಂಗ್ರೆಸ್ ಅಧಿವೇಶನದಲ್ಲಿ ಮಹತ್ವದ ನಿರ್ಣಯಗಳಾದವು. ಅಂದು ಧ್ವಜಾರೋಹಣ ಮಾಡಿದ ಮಹಾತ್ಮಾ ಗಾಂಧಿಯವರು ಬ್ರಿಟಿಷರು ಆ ತನಕ ನೀಡುತ್ತಿದ್ದ ಪೊಳ್ಳು ಭರವಸೆಗಳನ್ನು ತಳ್ಳಿ ಹಾಕಿದರು. ಸಂಪೂರ್ಣ ಸ್ವರಾಜ್ಯ ಗಳಿಸುವುದೇ ಮುಂದಿನ ಗುರಿಯೆಂದು ಸ್ಪಷ್ಟವಾಗಿ ಘೋಷಿಸಿದರು. ಆ ಬಗೆಗೆ ಸೂಕ್ತ ಕಾರ್ಯಕ್ರಮಗಳನ್ನು ಜರುಗಿಸುವ ಸಂಪೂರ್ಣ ಅಧಿಕಾರವನ್ನು ಕಾಂಗ್ರೆಸ್ ಗಾಂಧೀಜಿಯವರ ವಿವೇಚನೆಗೆ ಬಿಟ್ಟಿತು.

ಯಾವುದೇ ಕಾರ್ಯವನ್ನು ಮುಂದಾಲೋಚನೆ ಮಾಡದೆ ದುಡುಕುವುದು ಗಾಂಧೀಜಿಯವರ ಸ್ವಭಾವವಾಗಿರಲಿಲ್ಲ. ಆ ಬಗೆಗೆ ಕೆಲಕಾಲ ದೀರ್ಘಾಲೋಚನೆಯಲ್ಲಿ ತೊಡಗಿದ್ದರೆನಿಸುತ್ತದೆ. ಇಡೀ ದೇಶವೇ ಮಹಾತ್ಮರ ಯೋಜನೆಗಳೇನಿರಬಹುದೆಂಬ ಬಗೆಗೆ ಉಸಿರು ಬಿಗಿಹಿಡಿದು ಕಾಯುತ್ತಿತ್ತು. ಆ ಸಮಯದಲ್ಲಿ ಭೇಟಿಯಾದ ಗುರುದೇವ ರವೀಂದ್ರ ಟಾಗೋರರೇ ಕುತೂಹಲ ಭರಿತರಾಗಿ ಗಾಂಧೀಜಿಯವರ ಮನೋಗತವೇನೆಂಬುದರ ಬಗೆಗೆ ವಿಚಾರಿಸಿದ್ದರಂತೆ. ಅಂತರಾತ್ಮನ ಕರೆಯ ಸ್ಫೂರ್ತಿಗಾಗಿ ಕಾಯುತ್ತಿರುವೆ ಎಂದು ಚುಟುಕಾಗಿ ಉತ್ತರಿಸಿದ್ದರಂತೆ ಗಾಂಧೀಜಿ.

## ವೈಸ್‌ರಾಯರಿಗೆ ಪತ್ರ :

ಕಡೆಗೂ ಮಾರ್ಚ್ ತಿಂಗಳ ಹೊತ್ತಿಗೆ ಅಂತರಾತ್ಮನ ಕರೆ ಕೇಳಿಸಿರಬೇಕು. ಬಹಳ ದಿನಗಳಿಂದ ಮನಸ್ಸಿನಲ್ಲಿ ಮಂಥನವಾಗುತ್ತಿದ್ದ ವಿಚಾರಗಳ ಮೊದಲ ಹೆಜ್ಜೆಯಾಗಿ ಆಗಿನ ವೈಸ್‌ರಾಯ ಲಾರ್ಡ್ ಇರ್ವಿನ್ ಅವರಿಗೆ ಪತ್ರ ಬರೆದರು. ಬ್ರಿಟಿಷರ ಆಡಳಿತದ ಫಲವಾಗಿ ಬಡ ಭಾರತೀಯರು

ಪಡುತ್ತಿರುವ ಬವಣೆ ಹಾಗೂ ದೇಶದಲ್ಲಿ ಅಧೋಗತಿಯ ತಳಮುಟ್ಟಿದ್ದ ರಾಜಕೀಯ ಹಾಗೂ ಸಾಮಾಜಿಕ ಸ್ಥಿತಿಗತಿಗಳ ಬಗೆಗೆ ಅವರ ಗಮನ ಸೆಳೆದು, ಅವೆಲ್ಲವುಗಳ ಪರಿಹಾರಕ್ಕೆ 'ಸ್ವರಾಜ್ಯ'ವೊಂದೇ ಮಾರ್ಗವೆಂದು ಹೇಳುವುದು ಅವರ ಗುರಿಯಾಗಿತ್ತು.

ಸಾವಿರದೊಂಬೈನೂರ ಮೂವತ್ತರ ಮಾರ್ಚ್ ಎರಡನೇ ದಿನಾಂಕ ಭಾರತದ ಸಾಮಾನ್ಯ ಪ್ರಜೆ ಮೋಹನದಾಸ ಗಾಂಧಿ ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಸರ್ವೋನ್ನತ ಅಧಿಕಾರಿಗೆ ಪತ್ರ ಬರೆದರು. ಅದರಲ್ಲಿ ಸೂಚಿಸಿದ ಅಂಶಗಳಿಂದ ಮಾತ್ರವಲ್ಲದೆ, ಸಂಬೋಧಿಸಿದ ರೀತಿಯಿಂದಲೂ ಅದು ಅಸಾಧಾರಣವಾದುದಾಗಿತ್ತು. (ಆ ತನಕ ಯಾವ ಭಾರತೀಯನೂ ವೈಸ್‌ರಾಯ್ ಮಹೋದಯನನ್ನು ಆ ರೀತಿ ಸಂಬೋಧಿಸಿದ ನಿದರ್ಶನಗಳಿರಲಿಲ್ಲ!)

"ಪ್ರಿಯ ಸ್ನೇಹಿತರೇ,

ತಮ್ಮ ಸರ್ಕಾರದ ಆಳ್ವಿಕೆಯಲ್ಲಿ ನಮ್ಮ ಜನತೆಗುಂಟಾಗುತ್ತಿರುವ ಕಷ್ಟ ಕೋಟಲೆಗಳ ಬಗೆಗೆ ತಮ್ಮ ಗಮನವನ್ನು ಆಗಾಗ್ಗೆ ಸೆಳೆಯುತ್ತಿರುವುದು ನೆನಪಿರಬಹುದು. ಇತ್ತೀಚೆಗೆ ಉಪ್ಪಿನ ತಯಾರಿಕೆ ಮತ್ತು ಮಾರಾಟದ ನಿರ್ಬಂಧ ಹೇರಿದ್ದಲ್ಲದೆ ಅದರ ಮೇಲೆ ತೆರಿಗೆಯನ್ನೂ ವಿಧಿಸಿದ್ದೀರಿ. ಉಸಿರಾಡುವ ಗಾಳಿಯ ಹಾಗೆ ಮನುಷ್ಯ ಹಾಗೂ ಜೀವ ಜಂತುಗಳ ಉಳಿವಿಗೆ ಉಪ್ಪು ಅದೆಷ್ಟು ಅವಶ್ಯಕವೆನ್ನುವುದು ತಮಗೆ ತಿಳಿಯದಿರುವುದೇನಲ್ಲ. ಪ್ರತಿ ದಿನ ಕೇವಲ ಎರಡು ಆಣೆ (ಇಂದಿನ ಹನ್ನೆರಡು ಪೈಸೆ) ಗಳಿಸುವ ಸಾಮಾರ್ಥ್ಯವಿಲ್ಲದ ಬಡ ಭಾರತೀಯ ಉಪ್ಪನ್ನೂ ಬಳಸಲಾಗದಂತಹ ಪರಿಸ್ಥಿತಿಯನ್ನು ನಿಮ್ಮ ಸರ್ಕಾರ ನಿರ್ಮಾಣ ಮಾಡಿದೆಯೆಂದರೆ ಅತಿಶಯೋಕ್ತಿಯಲ್ಲ. ದೌರ್ಜನ್ಯದ ಆಡಳಿತದಿಂದ ನಮ್ಮ ದಾಸ್ಯವನ್ನು ಮುಂದುವರಿಸಿಕೊಂಡು ಹೋಗುವ ಆಡಳಿತ ಯಂತ್ರದ ಉಳಿವಿಗಾಗಿ ಇಂತಹ ನಿರ್ಬಂಧ ಹಾಗೂ ತೆರಿಗೆಗಳನ್ನು ವಿಧಿಸುತ್ತಿರುವಿರೆಂದರೆ ಅಚ್ಚರಿಯಾಗಬಹುದಲ್ಲವೇ ತಮಗೆ? ಆ ಸಲುವಾಗಿ ತಮ್ಮದೇ ಒಂದು ನಿದರ್ಶನವನ್ನು ಉದಾಹರಿಸಲಿದ್ದೇನೆ."

"ಸ್ವತಃ ತಮಗೆ ಪ್ರತಿ ತಿಂಗಳೂ ೨೧,೦೦೦ ರೂಪಾಯಿಗಳ ವೇತನ ದೊರೆಯುತ್ತದೆ. ಅಂದರೆ ತಾವು ಪ್ರತಿ ದಿನ ೭೦೦ ರೂಪಾಯಿಗಳನ್ನು ಗಳಿಸುತ್ತಿದ್ದೀರಿ. ಅದರಿಂದ ಪ್ರತಿ ದಿನ ಕೇವಲ ಎರಡು ಆಣೆಗಳ ಗಳಿಕೆಗಾಗಿ ಬೆವರಿಳಿಸಿ ದುಡಿದು ಅರೆಹೊಟ್ಟೆಯಲ್ಲಿರುವ ಸಾಮಾನ್ಯ ಭಾರತೀಯನಿಗಿಂತ ಐದು ಸಾವಿರ ಪಟ್ಟು ವೇತನ ಪಡೆಯುತ್ತಿದ್ದೀರೆನ್ನಬಹುದು. ನಿಮ್ಮ ಮೇಲೆ ಅಧಿಕಾರವಿರುವ ಇಂಗ್ಲೆಂಡಿನ ಪ್ರಧಾನ ಮಂತ್ರಿಗಳು ಅಲ್ಲಿನ ಜನ ಸಾಮಾನ್ಯರ ವರಮಾನದ ಕೇವಲ ೯೦ರಷ್ಟು ವೇತನ ಪಡೆಯುತ್ತಾರಂತೆ! ಕೇವಲ ಮಾನವರೇ ಆಗಿರುವ ನಿಮಗೂ - ನಮಗೂ ಅದೆಷ್ಟು ತಾರತಮ್ಯವಿದೆಯೆಂಬುದನ್ನು ಮನನ ಮಾಡಲು ತಮಗೆ ಸಾಧ್ಯವಾಗಬಹುದೆಂದು ಭಾವಿಸುತ್ತೇನೆ. ವೈಯುಕ್ತಿಕವಾಗಿ ತಮ್ಮನ್ನು ದೂಷಿಸಲು ಇಲ್ಲಿ ತಮ್ಮದೇ ಉದಾಹರಣೆ ನೀಡುತ್ತಿರುವೆನೆಂದು ಭಾವಿಸಬೇಡಿ. ವೈಯಕ್ತಿಕವಾಗಿ ತಮ್ಮ ಮೇಲೆ ಅದೆಷ್ಟು ಗೌರವಾದರಗಳನ್ನಿರಿಸಿಕೊಂಡಿರುವೆನೆಂಬುದರ ಅರಿವು ತಮಗಿರಬಹುದು. ಇಂತಹ ವಿಚಾರಗಳಲ್ಲಿ ಸಂಬಂಧಿಸಿದವರ ಮನ ಸೆಳೆಯುವುದು ನನ್ನ ಉದ್ದೇಶವೇ ಹೊರತು, ತಮ್ಮ ಮನನೋಯಿಸುವ

ಇರಾದೆ ನನ್ನದಲ್ಲ.''

ಪತ್ರದಲ್ಲಿ ಗಾಂಧೀಜಿ ಇನ್ನೂ ಮುಂದುವರಿದು ಪ್ರಸ್ತುತ ಭಾರತೀಯರ ಸ್ಥಿತಿ-ಗತಿಗಳ ಸುಧಾರಣೆಗೆ ಕ್ರಮಗಳನ್ನು ಜರುಗಿಸಬೇಕು. ಅಲ್ಲದೆ ಭಾರತಕ್ಕೆ ರಾಜಕೀಯ ಸ್ವಾತಂತ್ರ್ಯ ನೀಡಲು ಕೂಡಲೇ ಕಾರ್ಯೋನ್ಮುಖವಾಗಬೇಕೆಂದು ಆಗ್ರಹಪಡಿಸಿದ್ದರು. ಆ ಬಗೆಗೆ ತೆಗೆದುಕೊಳ್ಳುವ ಕಾರ್ಯಗಳ ಬಗೆಗೆ ಅದೇ ತಿಂಗಳ ಹನ್ನೊಂದನೆ ತಾರೀಖಿನ ಗಡುವನ್ನು ವಿಧಿಸಿದ್ದರು. ಅಷ್ಟರಲ್ಲಿ ಸರ್ಕಾರದಿಂದ ಸರಿಯಾದ ಉತ್ತರ ಬಾರದಿದ್ದಲ್ಲಿ ಉಪ್ಪು ತಯಾರಿಕೆ ಮತ್ತು ತೆರಿಗೆಯ ಕಾನೂನು ಉಲ್ಲಂಘನೆ ಮಾಡಲು ಅವರ ಸಹೋದ್ಯೋಗಿಗಳೊಡನೆ ಕಾರ್ಯೋನ್ಮುಖರಾಗುವುದಾಗಿ ಸೂಚನೆ ನೀಡಿದ್ದರು. ಆ ದಿಸೆಯಲ್ಲಿ ಸಕಾರಾತ್ಮಕ ಧೋರಣೆ ವ್ಯಕ್ತಪಡಿಸಿದರೆ ಅವರು ವಿಧಿಸಿರುವ ಗಡುವನ್ನು ಮುಂದೂಡುವುದಾಗಿಯೂ ಹೇಳಿದ್ದರು.

ಪತ್ರ ದೆಹಲಿಯನ್ನು ತಲುಪಿದಾಗ ವೈಸ್‌ರಾಯರು ಸಿಮ್ಲಾದಲ್ಲಿ ಗಾಲ್ಫ್ ಕ್ರೀಡೆಯಲ್ಲಿ ತೊಡಗಿಸಿಕೊಂಡಿದ್ದರು. ಗಾಂಧೀಜಿಯವರಿಂದ ಪತ್ರ ಬಂದಿರುವುದು ತಿಳಿದ ಮರುದಿನವೇ ದೆಹಲಿಗೆ ವಿಮಾನದಲ್ಲಿ ವಾಪಸಾದರು. ಪತ್ರವನ್ನು ಓದಿದರಾದರೂ ವೈಯಕ್ತಿಕವಾಗಿ ಗಾಂಧೀಜಿಯವರಿಗೆ ಉತ್ತರ ಬರೆಯುವ ಸೌಜನ್ಯ ತೋರಿಸಲಿಲ್ಲ. ಬದಲಿಗೆ ಅವರ ಕಾರ್ಯದರ್ಶಿ ಉತ್ತರಿಸಿದರು. '' ಘನತೆವೆತ್ತ ವೈಸ್‌ರಾಯರಿಗೆ ತಮ್ಮ ಪತ್ರದ ಒಕ್ಕಣೆ ಬೇಸರ ಉಂಟುಮಾಡಿದೆ. ಉದ್ದೇಶಿತ ತಮ್ಮ ಕಾರ್ಯಕ್ರಮಗಳು ಕಾನೂನು ಸುವ್ಯವಸ್ಥೆಗೆ ಭಂಗ ಉಂಟು ಮಾಡಿ ಸಾರ್ವಜನಿಕರ ಶಾಂತಿಯನ್ನು ಕದಡಿಸಬಹುದಾಗಿದೆ'' ಎಂದು ಚುಟುಕಾಗಿ ಉತ್ತರಿಸಿದ್ದರು. ''ಮೊಣಕಾಲೂರಿ ರೊಟ್ಟಿ ಬೇಡಿದರೆ ಕಲ್ಲೇಟಿನ ಉತ್ತರ ದೊರೆಯಿತು'' ಎಂದು ಗಾಂಧೀಜಿ ಉದ್ಗರಿಸಿದರಂತೆ. ಆದರೆ ಉಪ್ಪಿನ ಕಾಯಿದೆಯನ್ನು ಮುರಿಯುವ ಉದ್ದೇಶದಿಂದ ಅವರು ವಿಚಲಿತರಾಗಲಿಲ್ಲ. ಅಹಮದಾಬಾದಿನ ಸಾಬರಮತಿ ಆಶ್ರಮದಿಂದ ಸುಮಾರು ಇನ್ನೂರು ಮೈಲಿ ದೂರದ ಗುಜರಾತಿನ ಕಡಲ ತೀರದ ದಾಂಡಿ ಎಂಬ ಪುಟ್ಟ ಹಳ್ಳಿಯಲ್ಲಿ ಉಪ್ಪು ತಯಾರಿಸುವ ನಿರ್ಧಾರ ಮೊದಲೇ ಮಾಡಿಯಾಗಿತ್ತು.

## ಗಾಂಧೀ ಮಹಾತ್ಮರು ದಾಂಡಿಗೆ ಹೊರಟರೆ.....

ಮಹಾತ್ಮರ ನಿರ್ಧಾರ ಪ್ರಕಟವಾಗುತ್ತಿದ್ದಂತೆಯೇ ಭಾರತವೂ ಸೇರಿದಂತೆ ವಿಶ್ವದಾದ್ಯಂತ ಮಿಶ್ರ ಪ್ರತಿಕ್ರಿಯೆಗಳುಂಟಾದವು. ಜವಹರಲಾಲ್ ನೆಹರು ಸೇರಿದಂತೆ ಹಲವು ಭಾರತೀಯ ಧುರೀಣರು ಇಂತಹ ಅಲ್ಪ ಕಾರ್ಯದಿಂದ ಏನು ಸಾಧಿಸಬಹುದೆಂದು ಅನುಮಾನಪಟ್ಟರು. ಆದರೆ ಗಾಂಧೀಜಿಯವರ ತತ್ವಗಳಲ್ಲಿ ಅಚಲ ವಿಶ್ವಾಸವಿದ್ದ ಜನ ಸಾಮಾನ್ಯರಲ್ಲಿ ಮಿಂಚಿನ ಪ್ರವಾಹ ಹರಿದಂತಾಯಿತು, ಭಾರತದಾದ್ಯಂತ ಹಳ್ಳಿ ಪಟ್ಟಣವಾಸಿಗಳೆಲ್ಲಾ ಆಂದೋಳನದಲ್ಲಿ ಭಾಗಿಗಳಾಗಲು ಉತ್ಸುಕರಾದರು. ಇಡೀ ಜನತೆಯ ದೃಷ್ಟಿ ಸಾಬರಮತಿ ಆಶ್ರಮದತ್ತ ಹರಿಯಿತು.

ಭಾರತೀಯರ ಪ್ರತಿಕ್ರಿಯೆ ಹೀಗಿದ್ದರೆ, ಇಂಗ್ಲೆಂಡ್ ಹಾಗೂ ದೆಹಲಿಯ ಆಡಳಿತ ವಲಯದಲ್ಲಿ ಒಂದು ರೀತಿಯ ಅಸಡ್ಡೆಯ ಮನೋಭಾವ ತಾಂಡವವಾಡುತ್ತಿತ್ತಂತೆ. ಆತನಕ

ಅರೇಬಿಕ್ ಕಥೆಯ ಫಕೀರನಂತೆ ಮುಗ್ಧ ಜನರಿಗೆ ಇಲ್ಲ-ಸಲ್ಲದ ಆಸೆಗಳನ್ನು ಹುಟ್ಟಿಸಿ ಮರೆಯುತ್ತಿದ್ದ ಗಾಂಧಿ ಮುಂದೆ ಹೇಳಹೆಸರಿಲ್ಲದಂತಾಗಿ ಬಿಡುತ್ತಾನೆ. ಕೇವಲ ಉಪ್ಪಿನ ಕಾಯಿದೆ ಮುರಿಯಲು ಅದೆಷ್ಟು ಜನ ಮುಂದಾಗುತ್ತಾರೆಂಬುದು ಅವರ ಅಂದಾಜಾಗಿತ್ತಂತೆ. ಆದರೂ ದೆಹಲಿ-ಲಂಡನ್‌ಗಳ ನಡುವೆ ಕೇಬಲ್ ವಿನಿಮಯ ಚುರುಕಾಗತೊಡಗಿತ್ತು.

ಸದಾ ಉಪವಾಸ, ಮಿತಾಹಾರ ಸೇವಿಸುತ್ತಾ, ಕಾಲ್ನಡಿಗೆಯಲ್ಲೇ ಪಯಣಿಸುತ್ತಿದ್ದ ಬಡಕಲ ಶರೀರದ ಗಾಂಧೀಜಿಗೆ ಆಗ ೬೧ ವರ್ಷ. ಆದರೂ ಕಟ್ಟುಮಸ್ತಾದ ಯುವಕರನ್ನು ನಾಚಿಸುವ ಉತ್ಸಾಹದ ಬುಗ್ಗೆ. ಅವರು ವಿಧಿಸಿದ ಗಡುವು ಮುಗಿದ ಮರುದಿನವೇ ಮಾರ್ಚ್ ೧೨ರಂದು ಬೆಳಿಗ್ಗೆ ಪ್ರಾತಃಕರ್ಮ, ಪ್ರಾರ್ಥನೆಗಳು ಮುಗಿದವು. ಸೊಂಟಕ್ಕೆ ತುಂಡು ಬಟ್ಟೆ ಧರಿಸಿ, ಖಾದಿ ಶಾಲು ಹೊದ್ದು ಬಿದಿರು ಕೋಲು ಹಿಡಿದು ಗಾಂಧೀಜಿ ದಾಂಡಿಯತ್ತ ಹೆಜ್ಜೆ ಹಾಕಲಾರಂಭಿಸಿದರು. ಆಶ್ರಮವಾಸಿಗಳಾದ ಸರೋಜಿನಿ ನಾಯ್ಡು, ಮಹದೇವ ದೇಸಾಯಿ ಸೇರಿದಂತೆ ೭೮ ಜನ ಅವರನ್ನು ಹಿಂಬಾಲಿಸಿದರು. ಕಲ್ಲುಮಣ್ಣಿನ ಕೊರಕಲು ದಾರಿಗಳಲ್ಲಿ ಭಜನೆ ಮಾಡುತ್ತ ನಡಿಗೆ ಮುಂದುವರಿಯಿತು. ಪ್ರತಿ ದಿನ ೧೦-೧೨ ಮೈಲುಗಳಷ್ಟು ನಡಿಗೆ, ಸಾಯಂಕಾಲ ತಲುಪಿದ ಹಳ್ಳಿಯಲ್ಲಿ ತಂಗುವುದು. ದಾಂಡಿ ಯಾತ್ರೆ ಆರಂಭವಾದದ್ದೇ ತಡ ಸುತ್ತ-ಮುತ್ತಲ ಜನಸ್ತೋಮ ಪಾದಯಾತ್ರೆಯ ತಂಡವನ್ನು ಸೇರಲಾರಂಭಿಸಿತು. ಸಾಕ್ಷಾತ್ ಮಹಾತ್ಮರನ್ನು ನೋಡುವುದು, ಅವರ ಯಾತ್ರೆಯಲ್ಲಿ ಭಾಗವಹಿಸುವುದು ಜೀವಮಾನದಲ್ಲಿ ದೊರೆತ ಸುಯೋಗವೆಂಬಂತಾಯಿತು ಅವರಿಗೆಲ್ಲ. ಮಹಾತ್ಮ ನಡೆದಾಡುವ ಹಾದಿ ಸುಗಮವಾಗಿರಲೆಂದು ತರಗೆಲೆ ಹೂವು ಮುಂತಾದವುಗಳ ಹಾಸು ದಾರಿಯುದ್ದಕ್ಕೂ ಏರ್ಪಾಡಾಗುತ್ತಿತ್ತು. ತಂಗಿದ ಊರುಗಳಲ್ಲಿ ಸಭೆ ಸಮಾರಂಭ, ಉಪ್ಪಿನ ಕಾಯಿದೆ ಭಂಗ ಮಾಡುವ ಉದ್ದೇಶ, ಬಡ ಜನರ ಏಳಿಗೆಯ ಬಗೆಗೆ, ವಿದ್ಯಾಭ್ಯಾಸ, ಮದ್ಯಪಾನ ನಿಷೇಧ, ಅಸ್ಪೃಶ್ಯತಾ ನಿವಾರಣೆ, ಖಾದಿ ನೂಲು ತಯಾರಿಸುವುದು, ಸತ್ಯ ಅಹಿಂಸಾ ಮಾರ್ಗಗಳ ಅನುಸರಣೆ ಬಗೆಗೆ ಗಾಂಧೀಜಿಯವರಿಂದ ಉಪದೇಶ; ಪ್ರಾರ್ಥನಾ ಸಭೆ ಮುಂತಾದವು ಜರುಗುತ್ತಿದ್ದವು.

ಗಾಂಧಿ ನಡೆಯಲಾರಂಭಿಸಿದ ದಾಂಡಿಯಾತ್ರೆ ದೇಶಾದ್ಯಂತ ಸುದ್ದಿಯಾಯಿತು. ಜನರ ಕುತೂಹಲ ಕೆರಳಿಸಿತು. ಹಿಂಡುಹಿಂಡಾಗಿ ಜನ ಅಂತಹ ಕಾರ್ಯದಲ್ಲಿ ತೊಡಗಿಕೊಳ್ಳಲು ಉದ್ಯುಕ್ತರಾದರು. ಸಮುದ್ರ ತೀರಗಳ ಜನರಲ್ಲದೆ ದೂರದೂರದವರು ಸಮುದ್ರ ತೀರಗಳ ಕಡೆ ಯಾತ್ರೆ ಆರಂಭಿಸಿದರು. ದಾರಿಯುದ್ದಕ್ಕೂ ಸಭೆ ಸಮಾರಂಭ ಜರುಗಿಸುತ್ತಾ ಜನಜಾಗೃತಿಯುಂಟು ಮಾಡಲಾರಂಭಿಸಿದರು. ಭಾರತದಾದ್ಯಂತ ಅದೊಂದು ಮಹಾಂದೋಳನವಾಗಿ ಮಾರ್ಪಟ್ಟಿತು.

ಸಾಬರಮತಿಯಿಂದ ಯಾತ್ರೆ ಆರಂಭವಾದಾಗ ಕುತೂಹಲಭರಿತ ಕೆಲವು ಸ್ಥಳೀಯ ಪತ್ರಕರ್ತರು ಜೊತೆಗೂಡಿದ್ದರು. ಸುದ್ದಿ ಹರಡಿದಂತೆಲ್ಲಾ ರಾಷ್ಟ್ರಾದ್ಯಂತದ ಪ್ರಮುಖ ಪತ್ರಿಕಾ ಪ್ರತಿನಿಧಿಗಳು ದಾಂಡಿಯಾತ್ರೆ ವರದಿ ಮಾಡಲು ಧಾವಿಸಿದರು. ವಿಷಯ ಪ್ರಪಂಚದಾದ್ಯಂತ ಕುತೂಹಲ ಕೆರಳಿಸಿತು. ಬ್ರಿಟನ್, ಅಮೆರಿಕಾ, ಯುರೋಪುಗಳಿಂದ ಪ್ರಮುಖ ಪತ್ರಕರ್ತರ ದಂಡು ವಿಮಾನಗಳ ಮೂಲಕ ಧಾವಿಸಿ ಬಂದಿತು. ದೇಶ ವಿದೇಶಗಳ ಮುತ್ಸದ್ದಿಗಳು

ಬೆರಗಾಗುವಂತಾಯಿತು. ಗಾಂಧೀಜಿಯವರ ರೀತಿ ನೀತಿಗಳ ಪರಿಚಯವಿದ್ದ ರಾಜಕೀಯ, ಸಾಮಾಜಿಕ, ಧಾರ್ಮಿಕ ಮುಖಂಡರೆಲ್ಲಾ ಅವರ ಆಂದೋಳನಕ್ಕೆ ಶುಭ ಕೋರಿ ಸಂದೇಶ ಕಳಿಸಿದರು. ದೆಹಲಿ – ಲಂಡನ್ನಿನಲ್ಲಿದ್ದ ಆಳರಸರು ಮೊದಲು ಅಸಡ್ಡೆಭಾವನೆ ತಾಳಿದ್ದರಾದರೂ, ಯಾತ್ರೆ ಮುಂದುವರಿದಂತೆಲ್ಲಾ ಎದ್ದು ಕುಳಿತು ಯೋಚಿಸುವಂತಾಯಿತು.

ಸಾಬರಮತಿಯಿಂದ ಹೊರಟ ಕಾಲ್ನಡಿಗೆ ಯಾತ್ರೆ ಏಪ್ರಿಲ್ ೫ರ ಸಂಜೆ ದಾಂಡಿ ಸಮುದ್ರ ತೀರವನ್ನು ತಲುಪಿತು. ಅಂದಿನ ಪ್ರಾರ್ಥನಾ ಸಭೆಯಲ್ಲಿ ಗಾಂಧೀಜಿ ಸುಧೀರ್ಘ ಭಾಷಣ ಮಾಡಿದರು. ದೇಶಾದ್ಯಂತ ಜನ ಹತ್ತಿರದ ಸಮುದ್ರ ತೀರದಲ್ಲಿ ಕಾಯಿದೆ ಭಂಗ ಮಾಡಿ ಉಪ್ಪು ತಯಾರಿಸಬೇಕೆಂದು ಕರೆ ನೀಡಿದರು. ‘‘ನಾನು ಉದ್ದೇಶಿತ ಕಾರ್ಯವನ್ನು ನಾಳೆ ಮಾಡಿಯೇ ತೀರುತ್ತೇನೆ. ವಿಫಲನಾದರೆ ನನ್ನ ಶವ ಸಮುದ್ರದಲ್ಲಿ ತೇಲಾಡುವುದನ್ನು ನೋಡುವಿರಿ’’ ಎಂದು ವೀರಾವೇಶದಿಂದ ಮಾತಾಡಿದರು.

ಮರುದಿನ ಬೆಳಿಗ್ಗೆ ಏಪ್ರಿಲ್ ೬, ಗಾಂಧೀಜಿ ಪವಿತ್ರ ಸಮುದ್ರ ಸ್ನಾನ ಮಾಡಿದರು. ದಡ ತಲುಪಿ ಉಡುಪು ತೊಟ್ಟುಕೊಂಡರು. ಸಮುದ್ರ ಅಲೆಗಳನ್ನು ನೊರೆನೊರೆಯಾಗಿ ದಡಕ್ಕೆಸೆಯುತ್ತಿದ್ದು, ದಡದಲ್ಲಿರುತ್ತಿದ್ದ ಉಪ್ಪಿನ ಅಂಶವನ್ನು ಕೈಗಳಲ್ಲಿ ಬಾಚಿ, ಶೇಖರವಾದ ಉಪ್ಪನ್ನು ಎತ್ತಿ ಹಿಡಿದು ಪ್ರದರ್ಶಿಸಿದರು. ಇನ್ನುಳಿದವರೂ ಹಾಗೆಯೇ ಮಾಡಲಾರಂಭಿಸಿದರು. ಕೆಲವರು ಮಣ್ಣಿನ ಮಡಿಕೆಗಳಲ್ಲಿ ಸಮುದ್ರದ ನೀರನ್ನು ದಡಕ್ಕೆ ತಂದು ಕಾಯಿಸಿ ನೀರು ಆರಿದ ನಂತರ ಉಳಿಯುವ ಉಪ್ಪಿನ ತಯಾರಿಗೆ ಮುಂದಾದರು. ಎಲ್ಲರೂ ಸಂತಸಭರಿತರಾಗಿ ಹರ್ಷೋದ್ಗಾರ ಮಾಡುತ್ತಲಿದ್ದರು. ದೇಶಾದ್ಯಂತ ಸಮುದ್ರ ತೀರಗಳಲ್ಲಿ ಸಾವಿರಗಟ್ಟಲೆ ಜನ ಇದೇ ರೀತಿ ಮಾಡಿ ಕಾಯಿದೆ ಭಂಗ ಮಾಡಿದರು. ಸರ್ಕಾರ ದಿಗ್ಭ್ರಮೆಗೊಂಡರೂ ಏನೂ ಮಾಡಲಾಗದ ಅಸಹಾಯಕ ಪ್ರೇಕ್ಷಕನಂತಾಯಿತು. ಪ್ರತಿಭಟನೆಯ ಸ್ವರೂಪದ ಆಳ, ವ್ಯಾಪ್ತಿಯನ್ನು ಅರ್ಥೈಸುವಲ್ಲಿ ಸಂಪೂರ್ಣವಾಗಿ ವಿಫಲರಾದರು. ಏಪ್ರಿಲ್ ೬ರ ಸಾಂಕೇತಿಕ ಕಾಯಿದೆ ಭಂಗ ಅಂದಿಗೇ ಮುಕ್ತಾಯವಾಗಲಿಲ್ಲ. ದೇಶದೆಲ್ಲೆಡೆ ಜನರು ಗುಂಪು ಗುಂಪಾಗಿ ಉಪ್ಪು ತಯಾರಿಸಿ ವಿತರಿಸತೊಡಗಿದರು. ಎಲ್ಲೆಲ್ಲೂ ಪ್ರತಿಭಟನಾ ಮೆರವಣಿಗೆ, ಸಭೆ ಸಮಾರಂಭಗಳು ಜರುಗುತ್ತಿದ್ದವು. ಕಾಂಗ್ರೆಸ್ಸಿನ ಕ್ರಾಂತಿಕಾರಿ ನಾಯಕ ಸುಭಾಷ್‌ಚಂದ್ರ ಬೋಸ್ ನೆಪೋಲಿಯನ್‌ನ ಇಲ್ಬಾದಿಂದ ಪ್ಯಾರಿಸ್‌ಗೆ ವಿಜಯಯಾತ್ರೆಗೆ ಹೋಲಿಸಿ ಪುಲಕಿತಗೊಂಡರಂತೆ. ಯಾತ್ರೆಯ ಯಶಸ್ಸಿನ ಬಗೆಗೆ ಸಂಶಯ ವ್ಯಕ್ತಪಡಿಸಿದ್ದ ನೆಚ್ಚಿನ ಅನುಯಾಯಿ ಜವಹರಲಾಲ್ ಈಗ ಪರಿತಪಿಸಿ ನಾಚುವಂತಾಯಿತಂತೆ. ಎಂದೂ ಮಣಿಸಲಾಗದೆಂಬ ಪ್ರಬಲ ಶಕ್ತಿಯ ವಿರುದ್ಧ ಸಾಂಕೇತಿಕ ಹಾಗೂ ಸರಳ ರೀತಿಯಲ್ಲಿ ಆರಂಭವಾದ ಚಳುವಳಿ ವಿಶ್ವದಲ್ಲೆಡೆ ಸುದ್ದಿಯಾಯಿತು. ಬಡಕಲು ದೇಹದ ಅರೆಬೆತ್ತಲೆ ಫಕೀರನಲ್ಲಿ ಅಡಗಿರುವ ಮಹಾನ್ ಶಕ್ತಿ ಹೊರಹೊಮ್ಮಿ ಪ್ರಕಟವಾಯಿತು.

ಉದ್ದೇಶವನ್ನು ಸಾಧಿಸಿದ ನಂತರ ಗಾಂಧೀಜಿ ಚಳುವಳಿಯ ಕೇಂದ್ರದಿಂದ ಕೆಲ ಸಮಯ ದೂರ ಸರಿದರು. ದಾಂಡಿಯ ಸಮೀಪದ ಕಾರಡಿ ಎಂಬ ಹಳ್ಳಿಯಲ್ಲಿ ಕೆಲವು ಸಹಚರರೊಡನೆ ಬೀಡುಬಿಟ್ಟರು. ಆದರೆ ಭುಗಿಲೆದ್ದ ಚಳುವಳಿ ಇಡೀ ದೇಶವನ್ನು ವ್ಯಾಪಿಸಿತು. ದೇಶದಾದ್ಯಂತ

ಪ್ರತಿಭಟನೆ, ಅಶಾಂತಿ ದಿನದಿನಕ್ಕೆ ಹೆಚ್ಚಾಗತೊಡಗಿತು. ಪೋಲಿಸರು ಮಧ್ಯಪ್ರವೇಶಿಸಿ ಲಾಠಿ ಚಾರ್ಜ್ ಮಾಡಿ ಗುಂಪುಗಳನ್ನು ಚದುರಿಸಲಾರಂಭಿಸಿದರು. ಮುಂದೆ ದಸ್ತಗಿರಿ, ಸೆರೆಮನೆ ವಾಸ ಆರಂಭವಾಯಿತು. ಪರಿಸ್ಥಿತಿ ವಿಕೋಪಕ್ಕೆ ಹೋಗಬಹುದೆಂದು ಗಾಬರಿಗೊಂಡ ಸರ್ಕಾರ ಜವಹರಲಾಲ್ ನೆಹರು, ಮಲ್ಲಭಬಾಯಿ ಪಟೇಲ್, ರಾಜಗೋಪಾಲಾಚಾರಿ, ಗಾಂಧಿ ಮಕ್ಕಳಾದ ರಾಮದಾಸ್ ಮತ್ತು ದೇವದಾಸ್ ಗಾಂಧಿಯವರು ಸೇರಿದಂತೆ ಪ್ರಮುಖ ಮುಖಂಡರನ್ನೆಲ್ಲಾ ಸೆರೆಮನೆಗೆ ತಳ್ಳಿದರು. ಆದರೂ ಜನ ಹಿಂಡುಹಿಂಡಾಗಿ ಉಪ್ಪು ತಯಾರಿಸಲು ಸಮುದ್ರದತ್ತ ತೆರಳುವುದನ್ನು ನಿಲ್ಲಿಸಲಿಲ್ಲ. ಬಿಹಾರದಲ್ಲಿ ಅಂತಹ ತಂಡವನ್ನು ಬಲವಂತವಾಗಿ ಪೋಲಿಸರು ತಡೆದಾಗ ಪ್ರತಿಭಟನಾಕಾರರು ರಸ್ತೆಯಲ್ಲಿ ಅಡ್ಡಲಾಗಿ ಮಲಗಿಬಿಟ್ಟರು. ಅವರನ್ನು ಚದುರಿಸಲು ಅಶ್ವಾರೋಹಿ ಸೈನಿಕ ತಂಡವನ್ನು ಅವರತ್ತ ಓಡಿಸಲಾಯಿತು. ಮಲಗಿದ ಜನರತ್ತ ಬಂದ ಕುದುರೆಗಳು ಮುಂದೆ ಹೆಜ್ಜೆ ಇಡದೆ ಗಕ್ಕನೆ ನಿಂತುಬಿಟ್ಟವಂತೆ! ಕರಾಚಿಯ ಸಮುದ್ರತೀರದಲ್ಲಿ ಸಾಮೂಹಿಕವಾಗಿ ಉಪ್ಪು ತಯಾರಿಸುವುದನ್ನು ವೀಕ್ಷಿಸಲು ಐವತ್ತು ಸಾವಿರ ಜನ ಜಮಾಯಿಸಿದ್ದರಂತೆ. ಆದರೆ ಪೋಲಿಸರಿಗೆ ಯಾರನ್ನೂ ದಸ್ತಗಿರಿ ಮಾಡಲು ಆಗಲಿಲ್ಲವಂತೆ. ಪೆಷಾವರ್‌ನಲ್ಲಿ ಕಿಕ್ಕಿರಿದು ಸೇರಿದ ಜನಸ್ತೋಮವನ್ನು ಚದುರಿಸಲು ಪೋಲಿಸರು ವಿಫಲರಾದರು. ಶಸ್ತ್ರಸಜ್ಜಿತ ಜಿಲ್ಲಾ ಮ್ಯಾಜಿಸ್ಟ್ರೇಟರ ಕಾರನ್ನು ಮುಂದೆ ಹೋಗಲು ಬಿಡಲಿಲ್ಲ. ರೊಚ್ಚಿಗೆದ್ದ ಮ್ಯಾಜಿಸ್ಟ್ರೇಟ್ ಅವರ ಮೇಲೆ ಮಿಷನ್‌ಗನ್ ದಾಳಿ ಮಾಡಿಸಿದ. ಸ್ಥಳದಲ್ಲೇ ೨೦ ಜನ ಸತ್ತು, ನೂರಾರು ಜನರಿಗೆ ಗಾಯಗಳಾದವು.

## ನಡುನಡುಗಿತು ಲಂಡನ್ ......................!

ಚಳುವಳಿ ಕಾಳ್ಗಿಚ್ಚಿನ ಹಾಗೆ ದೇಶವ್ಯಾಪಿ ಹರಡುತ್ತಿದ್ದಂತೆ ದೆಹಲಿ ಆಡಳಿತ ಅದನ್ನು ಹತ್ತಿಕ್ಕಲು ಪರದಾಡುವ ಸ್ಥಿತಿಯುಂಟಾಯಿತು. ಲಂಡನ್ ದೊರೆಗಳಿಗೆ ನಡುಕ ಉಂಟಾಗತೊಡಗಿತು. ದಾಂಡಿಯಾತ್ರೆ ವಿಫಲವಾಗಿ ಅರೆಬೆತ್ತಲೆ ಫಕೀರ ಸದ್ದಡಗಿ ಹೋಗುತ್ತಾನೆಂಬ ಅವರ ನಿರೀಕ್ಷೆ ತಲೆ ಕೆಳಗಾಯಿತು. ದೇಶದ ಪ್ರಮುಖ ಧುರೀಣರೇ ಅಲ್ಲದೆ ಸುಮಾರು ಅರವತ್ತು ಸಾವಿರದಿಂದ ಒಂದು ಲಕ್ಷ ಜನರನ್ನು ಜೈಲಿಗೆ ತಳ್ಳಿ, ಉಗ್ರ ಕ್ರಮಗಳನ್ನು ಜರುಗಿಸುತ್ತಿದ್ದರೂ ಪರಿಸ್ಥಿತಿಯನ್ನು ಸುಧಾರಿಸಲು ಸಾಧ್ಯವಾಗುತ್ತಿರಲಿಲ್ಲ. ದೆಹಲಿ - ಲಂಡನ್‌ಗಳ ನಡುವೆ ಅವಸರದ ವಿಚಾರ ವಿನಿಮಯಗಳು ನಡೆದು ಗಾಂಧೀಜಿಯವರನ್ನು ದಸ್ತಗಿರಿ ಮಾಡುವ ನಿರ್ಧಾರವಾಯಿತು.

ಮೇ ತಿಂಗಳ ದಿನಾಂಕ ೪-೫ರ ರಾತ್ರಿ ಗಾಂಧೀಜಿ ಮತ್ತು ಅವರ ಸಂಗಡಿಗರು ತಾವು ನೆಲೆಸಿದ್ದ ಕಾರಡಿ ಹಳ್ಳಿಯ ತೋಟ ಒಂದರಲ್ಲಿ ಮಲಗಿದ್ದರು; ಗಾಂಧೀಜಿಯವರು ಮಾವಿನಮರದ ಕೆಳಗೆ ಮಂಚದಲ್ಲಿ ನಿದ್ರಿಸುತ್ತಿದ್ದರು. ಅವರ ಸಹಚರರು ಅಲ್ಲೇ ಸುತ್ತಮುತ್ತ ಮಲಗಿದ್ದರು. ನಡುರಾತ್ರಿ ಕಳೆಯುತ್ತಿದ್ದಂತೆಯೇ ಕುದುರೆಗಳ ಖುರಪುಟದ ಶಬ್ದ ಕೇಳಿಸಿದಂತಾಯಿತು. ಸೂರತ್ ಜಿಲ್ಲೆಯ ಬ್ರಿಟಿಷ್ ಮ್ಯಾಜಿಸ್ಟ್ರೇಟ್ ಸುಮಾರು ೩೦ ಪೋಲಿಸ್ ಸಿಬ್ಬಂದಿಯನ್ನು ಕೂಡಿಕೊಂಡು ತೋಟ ಪ್ರವೇಶಿಸಿದರು. ಬ್ಯಾಟರಿ ಬೆಳಕು ಹಾಯಿಸುತ್ತ ಮ್ಯಾಜಿಸ್ಟ್ರೇಟ್ ಗಾಂಧೀಜಿ ಮಲಗಿದ್ದಲ್ಲಿಗೆ ಬಂದು ಅವರ ಮುಖದತ್ತ ಬೆಳಕು ಹಾಯಿಸಿದರು. ಕೂಡಲೇ ಎಚ್ಚರಗೊಂಡ ಅವರನ್ನು ಕುರಿತು "ಮೋಹನದಾಸ ಗಾಂಧೀ ಎಂದರೆ ನೀವೇನೋ" ಎಂದು ಪ್ರಶ್ನಿಸಿದರಂತೆ. ಗಾಂಧೀಜಿ

ಹೌದೆಂದಾಗ, ಅವರನ್ನು ದಸ್ತಗಿರಿ ಮಾಡಿ ಕರೆದುಕೊಂಡು ಹೋಗಲು ತಾವು ಬಂದಿರುವುದಾಗಿ ತಿಳಿಸಿದರಂತೆ. ಹಿಂದೆ ಮುಂದೆ ಯೋಚಿಸದೆ ಗಾಂಧೀಜಿ ಮುಖಮಾರ್ಜನ ಮಾಡಿ ತಯಾರಾಗಲು ತಮಗೆ ಸ್ವಲ್ಪ ಸಮಯ ಬೇಕಾಗುತ್ತದೆಂದರು. ಅದೆಲ್ಲಾ ಮುಗಿಸಿ ಬಂದ ಅವರು ದಸ್ತಗಿರಿ ಮಾಡುತ್ತಿರುವುದು ಸೆಕ್ಷನ್ ೧೨೪ರ ಪ್ರಕಾರವೇ ಎಂದು ವಿಚಾರಿಸಿದರು. ಹಾಗಲ್ಲ, ದಸ್ತಗಿರಿ ಮಾಡಲು ಮೇಲಿನವರು ಲಿಖಿತ ಆದೇಶ ನೀಡಿದ್ದು, ಅದರಂತೆ ದಸ್ತಗಿರಿ ಮಾಡಲಾಗುತ್ತಿದೆಯೆಂದು ಮ್ಯಾಜಿಸ್ಟ್ರೇಟ್ ಸ್ಪಷ್ಟನೆ ನೀಡಿದರಂತೆ. (ಗಾಂಧೀಜಿಯವರನ್ನು ಯಾವುದೇ ನಿರ್ದಿಷ್ಟ ಸೆಕ್ಷನ್ ಪ್ರಕಾರ ದಸ್ತಗಿರಿ ಮಾಡದಿರಲು ಸರ್ಕಾರಕ್ಕೆ ಕಾರಣಗಳಿದ್ದಿರಬೇಕು. ಅಂತಹ ಸಂದರ್ಭಗಳಲ್ಲಿ ಕೋರ್ಟಿನಲ್ಲಿ ಮ್ಯಾಜಿಸ್ಟ್ರೇಟ್‌ರ ಎದುರು ಬಹಿರಂಗ ವಿಚಾರಣೆ ನಡೆಸಬೇಕಾಗುತ್ತದೆ. ಹಿಂದೆ ೧೯೨೧ರಲ್ಲಿ ಅಂತಹ ವಿಚಾರಣೆ ನಡೆದಾಗ ಗಾಂಧೀಜಿ ಕಾಯಿದೆ ಉಲ್ಲಂಘನೆ ಮಾಡಿದ್ದನ್ನು ಒಪ್ಪಿಕೊಂಡಿದ್ದಲ್ಲದೆ, ಬ್ರಿಟಿಷ್ ಆಡಳಿತದ ದೌರ್ಜನ್ಯವನ್ನು ನಿರ್ದಾಕ್ಷಿಣ್ಯವಾಗಿ ಬಯಲಿಗೆಳೆದಿದ್ದರು. ಅದರಿಂದ ಮ್ಯಾಜಿಸ್ಟ್ರೇಟ್‌ರೇ ಕಕ್ಕಾಬಿಕ್ಕಿಯಾಗುವಂತಾಗಿತ್ತು. ಈ ಸಾರಿ ಅಂತಹ ಪ್ರದರ್ಶನಕ್ಕೆ ಸರ್ಕಾರ ತಯಾರಿರಲಿಲ್ಲವೆನಿಸುತ್ತದೆ.) ಸಂಗಡಿಗರೊಡಗೂಡಿ ಕೆಲ ಸಮಯ ಪ್ರಾರ್ಥನೆ ಮಾಡಿ ಮ್ಯಾಜಿಸ್ಟ್ರೇಟ್‌ರನ್ನು ಹಿಂಬಾಲಿಸಿದರು.

ಚಳುವಳಿಯ ಅಧ್ವರ್ಯುವನ್ನು ಜೈಲಿಗೆ ತಳ್ಳುವುದರಿಂದ ದೇಶದಾದ್ಯಂತ ಅಶಾಂತಿಯನ್ನು ಹತೋಟಿಗೆ ತರುವುದು ಸಾಧ್ಯವೆಂಬುದು ಬ್ರಿಟಿಷ್ ಸರ್ಕಾರದ ಉದ್ದೇಶವಾಗಿತ್ತೆನಿಸುತ್ತದೆ. ಆದರೆ ಆಂದೋಲನ ಮತ್ತಷ್ಟು ಉಗ್ರವಾಯಿತು. ದೇಶದಲ್ಲಿನ ಸೆರೆಮನೆಗಳೆಲ್ಲಾ ಭರ್ತಿಯಾದವಂತೆ. ಅದೇ ಸಮಯದಲ್ಲಿ ಇನ್ನೂ ಒಂದು ಭೀಕರ ಘಟನೆ ನಡೆದುಹೋಯಿತು.

## ಧರಷಾನಾ ದೌರ್ಜನ್ಯ :

ಗಾಂಧೀಜಿ ದಸ್ತಗಿರಿಯಾಗುವ ಕೆಲವು ದಿನಗಳ ಹಿಂದೆ ವೈಸ್‌ರಾಯರಿಗೆ ಪತ್ರ ಬರೆಯುವ ಸಲುವಾಗಿ ಕರಡನ್ನು ತಯಾರಿಸಿದ್ದರಂತೆ. ಅದರಂತೆ ದೈವೇಚ್ಛೆ ನೆರವೇರಿದರೆ ಮುಂಬಯಿ ಹತ್ತಿರವಿರುವ ಸರ್ಕಾರಿ ಸ್ವಾಮ್ಯದ ಧರಷಾನಾ (DHARASANA) ಎಂಬಲ್ಲಿರುವ ಉಪ್ಪು ತಯಾರಿಸುವ ಬೃಹತ್ ಕಾರ್ಯಾಗಾರಕ್ಕೆ ತಮ್ಮ ಸಂಗಡಿಗರ ಜೊತೆ ಮುತ್ತಿಗೆ ಹಾಕುವ ಯೋಜನೆಯನ್ನು ಹಾಕಿದ್ದರಂತೆ. ಆದರೆ, ದೈವೇಚ್ಛೆ ಈಡೇರುವ ಮೊದಲೇ ಅವರ ದಸ್ತಗಿರಿಯಾಯಿತು. ಅದು ಅವರ ಅನುಯಾಯಿಗಳ ಪಾಲಿಗೆ ಉಳಿಯಿತು. ಆಗಿನ್ನೂ ದಸ್ತಗಿರಿಯಾಗದೆ ಹೊರಗೆ ಉಳಿದಿದ್ದ ಸರೋಜಿನಿ ನಾಯ್ಡು ಮುಂಬಯಿಗೆ ೧೫೦ ಮೈಲಿ ದೂರದಲ್ಲಿದ್ದ ಧರಷಾನಾಕ್ಕೆ ಸುಮಾರು ೧೫೦೦ ಕಾಂಗ್ರೆಸ್ ಕಾರ್ಯಕರ್ತರೊಡನೆ ಪಾದಯಾತ್ರೆಯಲ್ಲಿ ಸಾಗಿದರು. ಆರು ಜನ ಬ್ರಿಟಿಷ್ ಅಧಿಕಾರಿಗಳ ನೇತೃತ್ವದಲ್ಲಿ ನಾಲ್ಕುನೂರು ಜನ ಭಾರತೀಯ ಪೋಲಿಸರ ಸರ್ಪಗಾವಲನ್ನು ಅದರ ರಕ್ಷಣೆಗೆ ಒದಗಿಸಲಾಗಿತ್ತು. ಅಂದು ಜರುಗಿದ ಭೀಕರ ಘಟನೆಯ ವಿವರಗಳನ್ನು ಭಾರತೀಯನೊಬ್ಬನು ವಿವರಿಸುವುದಕ್ಕಿಂತ ಪರಕೀಯರೊಬ್ಬರಿಂದ ತಿಳಿಯುವುದೇ ಸಮಂಜಸವೆನಿಸುತ್ತದೆ. ಅಮೆರಿಕಾದ ಯುನೈಟೆಡ್ ಪ್ರೆಸ್ ವರದಿಗಾರ ವೆಬ್ ಮಿಲ್ಲರ್ ಅಂದು ಪ್ರತ್ಯಕ್ಷದರ್ಶಿಯಾಗಿದ್ದು ಮಾಡಿದ್ದ ವರದಿ ಇಲ್ಲಿದೆ.

''ಯಾವುದೇ ಸದ್ದುಗದ್ದಲ ಮಾಡದೇ ಗಾಂಧಿ ಅನುಯಾಯಿಗಳು ಉಪ್ಪು ಶೇಖರಿಸಿಡಲಾಗಿದ್ದ ತಾಣದ ಒಂದು ನೂರು ಅಡಿಗಳ ಸನಿಹ ಸಾಗಿ ಶಿಸ್ತುಬದ್ಧರಾಗಿ ನಿಂತುಕೊಂಡರು. ಕಾರ್ಯಾಗಾರಕ್ಕೆ ನುಗ್ಗಿ ಉಪ್ಪು ವಶಪಡಿಸಲು ಅವರ ನೇತಾರರಿಂದ ಆದೇಶ ಬರುತ್ತಲೇ ಮೊದಲ ತಂಡದ ೨೫ಜನ ಸ್ವಯಂ ಸೇವಕರು ಗಾಂಧಿ ಪುತ್ರ ಮಣಿಲಾಲ್ ಜೊತೆ ನಡುವೆ ಇದ್ದ ಚರಂಡಿಯನ್ನು ದಾಟಿ ತಂತಿ ಬೇಲಿಯತ್ತ ಸಾಗಿದರು. ಅಷ್ಟರಲ್ಲೇ ಪೋಲಿಸ್ ಅಧಿಕಾರಿ ಅವರ ಮೇಲೆ ದಾಳಿ ನಡೆಸುವ ಆಜ್ಞೆ ಮಾಡಿದ. ಒಡನೆಯೇ ಭಾರತೀಯ ಪೋಲಿಸ್ ಪೇದೆಗಳು ತುದಿಗೆ ಕಬ್ಬಿಣದ ಉಂಗುರ ಅಳವಡಿಸಿದ ಲಾಠಿಗಳಿಂದ ಸ್ವಯಂಸೇವಕರ ತಲೆ ಬುರುಡೆಗಳ ಮೇಲೆ ಪ್ರಹಾರ ಮಾಡಲಾರಂಭಿಸಿದರು. ಅವುಗಳ ಹೊಡೆತಗಳನ್ನು ತಡೆಯಲು ಯಾರೊಬ್ಬರೂ ಕೈ ಎತ್ತಲಿಲ್ಲ; ಹೆಚ್ಚಾಗಿ ರೋದನ ಮಾಡಲೂ ಇಲ್ಲ. ತಲೆ ಬುರುಡೆಗಳಿಗೆ ಏಟು ತಗಲುತ್ತಲೇ ತರಗೆಲೆಗಳಂತೆ ನೆಲಕ್ಕುರುಳುತ್ತಿರುವ ದೃಶ್ಯ ಮನಕರಗಿಸುವಂತಿತ್ತು. ಸ್ವಲ್ಪ ದೂರದಲ್ಲಿ ನಿಂತಿದ್ದ ನನಗೆ ಹೇವರಿಕೆಯಾಗುತ್ತಿತ್ತು. ಲಾಠಿಗಳ ಲಟ ಲಟ ಶಬ್ದ ಕೇಳಿಸಿದಾಗಲೆಲ್ಲಾ ಜಿಗುಪ್ಸೆಯಿಂದ ನರಳುವಂತಾಗುತ್ತಿತ್ತು. ದೃಶ್ಯವನ್ನು ವೀಕ್ಷಿಸುತ್ತಿದ್ದ ಇತರೆ ಸ್ವಯಂ ಸೇವಕರು ಸದ್ದು ಮಾಡದೇ ಉಸಿರು ಬಿಗಿಹಿಡಿದು ನಿಂತಿದ್ದರು. ನೆಲಕ್ಕುರುಳಿದವರು ಒಡೆದ ತಲೆ, ಕೈಕಾಲು ಮುರಿತಗಳಿಂದ ವಿಲವಿಲ ಒದ್ದಾಡುತ್ತಿದ್ದರು. ಕೆಲವರು ಪ್ರಜ್ಞೆ ತಪ್ಪಿ ನಿಶ್ಚೇಷ್ಟಿತರಾಗಿ ಬಿದ್ದುಕೊಂಡಿದ್ದರು. ಕಾಯ್ದು ನಿಂತಿದ್ದ ಇನ್ನೊಂದು ಸ್ವಯಂ ಸೇವಕರ ತಂಡ ಅದೇ ರೀತಿ ಮುನ್ನುಗ್ಗುತ್ತಿತ್ತು. ಅವರನ್ನೂ ಪೋಲಿಸರು ನಿರ್ದಾಕ್ಷಿಣ್ಯವಾಗಿ ಬಡಿದುರುಳಿಸುತ್ತಿದ್ದರು. ತಲೆ, ಎದೆ, ಹೊಟ್ಟೆ, ಮರ್ಮಾಂಗಗಳ ಮೇಲೆ ಹೊಡೆದು, ಒದೆಯುತ್ತಿದ್ದರೂ ಅವರಾರೂ ಮಿಸುಕಾಡುತ್ತಿರಲಿಲ್ಲ. ಕೆಲವರನ್ನು ಎಳೆದು ಅಲ್ಲಿದ್ದ ಹೊಂಡಗಳಿಗೆ ಬಿಸಾಡುತ್ತಿದ್ದರು. ನಾನು ನಿಂತುಕೊಂಡಿದ್ದ ಜಾಗದ ಹತ್ತಿರವಿದ್ದ ಹೊಂಡವೊಂದಕ್ಕೆ ಗಾಯಾಳು ಒಬ್ಬನನ್ನು ಎಸೆದಾಗ ಕೆಸರು ನನ್ನ ಮೇಲೂ ಸಿಡಿದು ಬಟ್ಟೆಬರೆಗಳನ್ನು ಗಲೀಜು ಮಾಡಿತು. ಗಾಯಾಳುಗಳನ್ನು ಇತರೆ ಸ್ವಯಂ ಸೇವಕರು ಸ್ಟ್ರೆಚರುಗಳಲ್ಲಿ ಮಲಗಿಸಿ ಎತ್ತಿಕೊಂಡು ಹೋಗುತ್ತಿದ್ದರು. ಹನ್ನೊಂದು ಗಂಟೆ ಹೊತ್ತಿಗೆ ಬಿಸಿಲಿನ ಕಾವು ೧೧೬ ಡಿಗ್ರಿಗೆ ಏರಿದಂತೆಲ್ಲಾ ಕಾರ್ಯಾಚರಣೆ ಸ್ಥಗಿತಗೊಂಡಿತು.''

ಸ್ವಲ್ಪ ಸಮಯದ ನಂತರ ಗಾಯಗೊಂಡವರ ಚಿಕಿತ್ಸೆಗಾಗಿ ಏರ್ಪಾಡು ಮಾಡಿದ್ದ ಹಂಗಾಮಿ ಚಿಕಿತ್ಸಾ ಕೇಂದ್ರಕ್ಕೆ ಅವರು ಭೇಟಿ ನೀಡಿದರು. ಅಲ್ಲಿ ೩.೨೦ ಜನರು ಗಾಯಗಳಿಂದ ತೀವ್ರವಾಗಿ ನರಳುತ್ತಿದ್ದು, ಇಬ್ಬರು ಸಾವನ್ನಪ್ಪಿದ್ದರು. ಇನ್ನೂ ಹಲವರು ಪ್ರಜ್ಞಾಶೂನ್ಯರಾಗಿದ್ದರೆಂದು ವೆಬ್‌ಮಿಲ್ಲರು ವರದಿ ಮಾಡಿದ್ದರು.

ಧರಸಾನಾ ಉಪ್ಪಿನ ಘಟಕವನ್ನು ಕಾಂಗ್ರೆಸ್ ಕಾರ್ಯಕರ್ತರ ಮುತ್ತಿಗೆಯಿಂದ ರಕ್ಷಿಸುವಲ್ಲಿ ಬ್ರಿಟಿಷರು ಯಶಸ್ವಿಯಾಗಿದ್ದರು. ಆದರೆ ಅಂದು ಅವರು ನಿರಾಯುಧ ಅಹಿಂಸಾ ಪ್ರತಿಪಾದಕ ಕಾಂಗ್ರೆಸ್ ಸ್ವಯಂ ಸೇವಕರನ್ನು ನಿರ್ದಾಕ್ಷಿಣ್ಯವಾಗಿ ಹೊಡೆದು ಬಡಿದು ಗಾಯಗೊಳಿಸಿ, ಸಾಯಿಸಿದ ಬ್ರಿಟಿಷರ ಕಠೋರ ವರ್ತನೆಯ ಸುದ್ದಿ ಪ್ರಪಂಚದ ಮೂಲೆ ಮೂಲೆಗಳಿಗೆ ಮಿಂಚಿನಂತೆ ಪ್ರವಹಿಸಿತು. ಅಮೆರಿಕಾದ ಯುನೈಟೆಡ್ ಪ್ರೆಸ್ ಪತ್ರಿಕಾ ಪ್ರತಿನಿಧಿ ಘಟನೆಯನ್ನು ಪ್ರತ್ಯಕ್ಷವಾಗಿ

ವೀಕ್ಷಿಸಿ ಕಣ್ಣಿಗೆ ಕಟ್ಟುವಂತೆ ವಿವರಿಸಿ ಕಳುಹಿಸಿದ ವರದಿ ದೇಶ ವಿದೇಶಗಳಲ್ಲಿ ಒಂದು ಸಾವಿರಕ್ಕೂ ಹೆಚ್ಚು ಪತ್ರಿಕೆಗಳಲ್ಲಿ ಪ್ರಕಟವಾಯಿತಂತೆ. ಆಳರಸರ ನಾಡಿನಲ್ಲೇ ಈ ಬಗೆಗೆ ಅವಮಾನ, ಜಿಗುಪ್ಸೆ ಪಟ್ಟುಕೊಳ್ಳುವಂತಾಯಿತು. ಆಗ ಬ್ರಿಟನ್ನಿನ ಸಮ್ಮಿಶ್ರ ಸರ್ಕಾರದಲ್ಲಿ ಭಾರತ ಸ್ವಾತಂತ್ರ್ಯದ ಬಗೆಗೆ ಸಹಾನುಭೂತಿಯುಳ್ಳ ಲೇಬರ್ ಪಕ್ಷದ ಮಂತ್ರಿಗಳು ವೈಸ್‌ರಾಯರ ಕ್ರಮಗಳನ್ನು ಖಂಡಿಸಲಾರಂಭಿಸಿದರು.

ಇತ್ತ ಭಾರತದಲ್ಲಿ ಪ್ರತಿಭಟನೆ ಇನ್ನೂ ಉಗ್ರರೂಪ ತಾಳಿತು. ಪೆಷಾವರ್ ನಗರವನ್ನು 'ಗಡಿನಾಡಿನ ಗಾಂಧಿ' ಖಾನ್ ಅಬ್ದುಲ್ ಗಫಾರ್ ಖಾನ್‌ರ 'ಕೆಂಪಂಗಿ ದಳ' ತಮ್ಮ ವಶಪಡಿಸಿಕೊಂಡು ಬ್ರಿಟಿಷರಿಂದ ಬಿಡುಗಡೆಗೊಳಿಸಿದರೆಂದು ಘೋಷಿಸಿದರು. ಮೂರು ದಿನಗಳ ನಂತರ ಸೇನಾಬಲ ಮಿಷನ್‌ಗನ್ ಉಪಯೋಗಿಸಿ ಅದನ್ನು ವಿಮುಕ್ತಿಗೊಳಿಸಬೇಕಾಯಿತು. ಆದರೂ ಆ ಸೇವಾ ತಂಡದಲ್ಲಿದ್ದ ಹೆಸರಾಂತ ಹಿಂದೂ ರೆಜಿಮೆಂಟ್ ಘರ್‌ವಾಲ್ ರೈಫಲ್ಸ್‌ನವರು ಮುಸ್ಲಿಂ ಸಹೋದರರ ಮೇಲೆ ಗುಂಡುಹಾರಿಸಲು ನಿರಾಕರಿಸಿದರಂತೆ! ಅವರನ್ನೆಲ್ಲಾ ಬಂಧಿಸಿ ಮಿಲಿಟರಿ ವಿಚಾರಣೆ ಮಾಡಿ ಹಲವು ವರ್ಷಗಳ ಜೈಲು ಶಿಕ್ಷೆ ವಿಧಿಸಿದರಂತೆ. ಇವೆಲ್ಲದರ ಜೊತೆ ಜನ ಸ್ವಯಂಪ್ರೇರಿತರಾಗಿ ಸರ್ಕಾರಕ್ಕೆ ಸಲ್ಲಿಸಬೇಕಾದ ಕಂದಾಯ ಮತ್ತಿತರ ತೆರಿಗೆಗಳನ್ನು ಕೊಡಲು ನಿರಾಕರಿಸಿದರು. ಗ್ರಾಮಾಡಳಿತ ನೌಕರರಿಂದ ಹಿಡಿದು, ಮೇಲಸ್ತರದ ಅಧಿಕಾರಿಗಳನೇಕರು ರಾಜೀನಾಮೆ ನೀಡಿ ಚಳುವಳಿಯನ್ನು ಸೇರಲಾರಂಭಿಸಿದರು. ದೇಶವ್ಯಾಪ್ತಿ ಅಶಾಂತಿ ಗಲಭೆಗಳ ಜೊತೆಗೆ ಸರ್ಕಾರದ ಆದಾಯವೂ ಕುಸಿಯಲಾರಂಭಿಸಿತು. ನಿಜ, ಭಾರತೀಯರನ್ನು ಲಾಠಿಗಳಿಂದ ಬಡಿದರು. ಬಂದೂಕುಗಳ ಹಿಂದಿನ ತುದಿಗಳಿಂದ ತಿವಿದರು. ಆದರೆ ಭಾರತೀಯರು ಅವಾವುದಕ್ಕೂ ಅಂಜಲಿಲ್ಲ, ಅಳುಕಲಿಲ್ಲ ಅಥವಾ ಹಿಮ್ಮೆಟ್ಟಿ ಓಡಿ ಹೋಗಲಿಲ್ಲ. ಈ ವರ್ತನೆಯೇ ಬ್ರಿಟಿಷರು ಅಸಮರ್ಥರಾಗುವಂತೆ ಮಾಡಿತು. ಅಂತಿಮವಾಗಿ ಭಾರತೀಯರನ್ನು ಅಜೇಯರನ್ನಾಗಿಸಿತು.

ಹೀಗೆ ಉದ್ಭವವಾದ ಪರಿಸ್ಥಿತಿಯಲ್ಲಿ ಲಂಡನ್ ಮತ್ತು ದೆಹಲಿ ಆಡಳಿತದವರು ಇಕ್ಕಟ್ಟಿನ ಸ್ಥಿತಿಯಲ್ಲಿ ಸಿಲುಕುವಂತಾಯಿತು. ಗಾಂಧಿ ಆಶ್ರಮದಲ್ಲೋ, ಸಮುದ್ರ ತೀರದಲ್ಲೋ ಇದ್ದರೆ ಅಪಾಯವೆಂದು ಜೈಲಿಗೆ ಹಾಕಿದರೆ ಅಪಾಯ ಇನ್ನೂ ಹೆಚ್ಚಾಗತೊಡಗಿತು. ಏನಾದರೊಂದು ಮಾರ್ಗವನ್ನು ಕಂಡು ಹಿಡಿಯುವ ಸಲುವಾಗಿ ಲೇಬರ್ ಪಕ್ಷದ ಮುಖವಾಣಿ ಪತ್ರಿಕೆ '' ಡೈಲಿ ಹೆರಾಲ್ಡ್'' ನ ಪ್ರತಿನಿಧಿಯನ್ನು ಭಾರತಕ್ಕೆ ಕಳುಹಿಸಿ ಗಾಂಧೀಜಿಯವರನ್ನು ಭೇಟಿಯಾಗುವ ಏರ್ಪಾಡಾಯಿತು. ಹಾಗೆಯೇ ವೈಸ್‌ರಾಯ್ ಸಂಪುಟದ ಕೆಲವು ಸದಸ್ಯರು ಗಾಂಧೀಜಿಯನ್ನು ಭೇಟಿಯಾದರು. ಇವಾವುದರಿಂದಲೂ ಯಾವುದೇ ನಿರ್ಧಾರ ಆಗಲಿಲ್ಲ. ಭಾರತದ ಎಲ್ಲಾ ಸಮಸ್ಯೆಗಳ ಬಗೆಗೆ ಲಂಡನ್ನಿನಲ್ಲಿ ದುಂಡು ಮೇಜಿನ ಪರಿಷತ್‌ನ್ನು ಏರ್ಪಡಿಸಿದರು. ನವೆಂಬರ್ (೧೯೩೦) ನಲ್ಲಿ ಜರುಗಿದ ಸಮ್ಮೇಳನದಲ್ಲಿ ಮಹಮದಾಲಿ ಜಿನ್ನಾ ಮತ್ತು ಇತರೆ ಕೆಲವು ಪಕ್ಷದವರು ಭಾಗವಹಿಸಿದ್ದರು. ಅದು ವಿಫಲವಾಯಿತು. ಕಾಂಗ್ರೆಸ್ ಮತ್ತು ಗಾಂಧಿ ಭಾಗವಹಿಸದೇ ಏನೂ ಆಗುವುದಿಲ್ಲವೆಂಬ ಅರಿವಾಯಿತು.

ಆದರಿಂದಾಗಿ ಗಾಂಧೀಜಿಯೊಂದಿಗೆ ನೇರ ಸಂಧಾನವೊಂದೇ ಮಾರ್ಗವೆಂದರಿತ ಸರ್ಕಾರ ಗಾಂಧೀಜಿ, ನೆಹರು, ಪಟೇಲ್ ಮುಂತಾದವರನ್ನು ಬೇಷರತ್ತಾಗಿ ಜೈಲುಗಳಿಂದ ಬಿಡುಗಡೆ ಮಾಡಿತು. ಅಜಾತಶತ್ರುವಾದ ಗಾಂಧೀಜಿಯವರೇ ಭೇಟಿಗೆ ಅವಕಾಶ ಕೇಳಿ ಲಾರ್ಡ್ ಇರ್ವಿನ್‌ರಿಗೆ ಪತ್ರ ಬರೆದರು. ಅದೇ ಪ್ರಖ್ಯಾತ 'ಗಾಂಧೀ-ಇರ್ವಿನ್ ಒಪ್ಪಂದ'ಕ್ಕೆ ನಾಂದಿಯಾಯಿತು. ಮಾರ್ಚ್ (೧೯೩೧)ರಲ್ಲಿ ಸಹಿಯಾದ ಆ ಒಪ್ಪಂದ ಹಲವು ಬಗೆಯ ವಿವಾದಗಳಿಗೆ ಎಡೆಮಾಡಿಕೊಟ್ಟಿತ್ತಾದರೂ, ವರ್ಷದ ಕೊನೆಯಲ್ಲಿ ಎರಡನೇ ದುಂಡು ಮೇಜಿನ ಪರಿಷತ್ತು ಸಮಾವೇಶವಾಗಲು ತಳಹದಿಯಾಯಿತು. ಕಾಂಗ್ರೆಸ್ಸಿನ ಏಕೈಕ ಪ್ರತಿನಿಧಿಯಾಗಿ ಗಾಂಧೀಜಿ ಅದರಲ್ಲಿ ಭಾಗವಹಿಸಿದ್ದರಾದರೂ, ಅದೂ ವಿಫಲವಾಯಿತೆಂಬುದು ಪ್ರತ್ಯೇಕ ವಿಚಾರ. ಆದರೆ ಈ ಎಲ್ಲಾ ಬೆಳವಣಿಗೆಗೆ ಗಾಂಧೀಜಿ ಆರಂಭಿಸಿದ ದಾಂಡಿಯಾತ್ರೆ ಕಾರಣವಾಯಿತೆಂದರೆ ಅತಿಶಯೋಕ್ತಿಯಲ್ಲ. ಅದರಿಂದಲೇ ಭಾರತ ಸ್ವಾತಂತ್ರ್ಯ ಸಂಗ್ರಾಮದ ಮುಂದಿನ ಕಾರ್ಯಕ್ರಮಗಳಿಗೆ ವೇಗವರ್ಧಕ ಚಾಲನೆ ದೊರೆಯಿತೆಂಬುದು ಇತಿಹಾಸದ ಪುಟಗಳಲ್ಲಿ ಸೇರಿ ಹೋಗಿದೆ.

ನಮ್ಮ ಸ್ವಾತಂತ್ರ್ಯ ಸಂಗ್ರಾಮದ ಒಂದು ಘಟ್ಟದ ಈತನಕದ ನೀರಸ ವಿವರಣೆಗಳ ನಡುವೆ ಜರುಗಿದ ಸ್ವಾರಸ್ಯಕರ ಘಟನೆಯೊಂದರ ಪ್ರಸ್ತಾಪ ಅಪ್ರಸ್ತುತವಾಗಲಾರದು. ಅದು ಒಂದು ರೀತಿಯಲ್ಲಿ ದಾಂಡಿಯಾತ್ರೆಗೆ ಸ್ಫೂರ್ತಿಯಾಗಿರುವಂತೆಯೇ ಗಾಂಧೀಜಿಯವರ ಹಾಸ್ಯಪ್ರಜ್ಞೆ ಹಾಗೂ ಸಮಯಸ್ಫೂರ್ತಿಗೆ ಸಾಕ್ಷಿಯೆಂಬತಿದೆ.

ಗಾಂಧೀಜಿಯವರು ೧೯೩೦ರಲ್ಲಿ ದಾಂಡಿಯಾತ್ರೆ ಹೊರಡುವ ೧೫೦ ವರ್ಷಗಳ ಹಿಂದೆ ಅಮೆರಿಕಾ ಸಂಯುಕ್ತ ಸಂಸ್ಥಾನ ಭಾರತದಂತೆಯೇ ಬ್ರಿಟಿಷರ ವಸಾಹತಾಗಿತ್ತಷ್ಟೇ. ಅಲ್ಲಿಯೂ ಇಲ್ಲಿಯ ಹಾಗೇ ಸ್ಥಳೀಯರ ಶೋಷಣೆ ಸಂಪನ್ಮೂಲಗಳ ದರೋಡೆ ಅನೂಚಾನವಾಗಿ ಮುಂದುವರಿದಿದ್ದವು. ಆ ಸಮಯದಲ್ಲಿ ಭಾರತದಲ್ಲಿನ ಬಹುಪಾಲು ಚಹಾ ತೋಟಗಳು ಈಸ್ಟ್ ಇಂಡಿಯಾ ಕಂಪನಿಯವರ ಸ್ವಾಮ್ಯದಲ್ಲಿದ್ದವು. ಅವುಗಳಲ್ಲಿ ಉತ್ಪಾದನೆಯಾಗುವ ಟೀ ಸಂಪೂರ್ಣವಾಗಿ ಇಂಗ್ಲೆಂಡಿಗೆ ರವಾನೆಯಾಗಿ ಅಲ್ಲಿಂದ ಇತರ ದೇಶಗಳಿಗೆ ಮಾರಾಟ ಮಾಡುವ ಏರ್ಪಾಡಾಗಿತ್ತು. ಹಾಗೇ ದಾಸ್ತಾನುಗುತ್ತಿದ್ದುದ್ದರಲ್ಲಿ ಒಂದು ಸಾರಿ ಸುಮಾರು ಹದಿನೇಳು ಮಿಲಿಯನ್ ಪೌಂಡು ಟೀ ಖರ್ಚಾಗದೇ ಇಂಗ್ಲೆಂಡಿನ ಗೋಡೌನ್‌ಗಳಲ್ಲಿ ಕೊಳೆಯುತ್ತಾ ಬೀಳುವಂತಾಯಿತಂತೆ. ತಮ್ಮ ದೇಶದ ಈಸ್ಟ್ ಇಂಡಿಯಾ ಕಂಪನಿಗೆ ಆಗುವ ನಷ್ಟವನ್ನು ತಡೆಯಲು ಹಾಗೇ ದಾಸ್ತಾನಾಗಿರುವ ಟೀಯನ್ನು ತಮ್ಮ ಇನ್ನೊಂದು ವಸಾಹತಾಗಿರುವ ಅಮೆರಿಕಾದ ರಾಜ್ಯಗಳಲ್ಲಿ ಕಡ್ಡಾಯವಾಗಿ ಮಾರಾಟ ಮಾಡುವ ಹಕ್ಕನ್ನು ಇಂಗ್ಲೆಂಡ್ ಪಾರ್ಲಿಮೆಂಟ್ ನೀಡಿತು. ಆ ಮೊದಲು ಅಮೆರಿಕಾದ ರಾಜ್ಯಗಳು ತಮ್ಮ ಅಕ್ಕಪಕ್ಕದ ಇಲ್ಲವೇ ಇತರ ಮುಕ್ತ ಮಾರುಕಟ್ಟೆಗಳಲ್ಲಿ ಖರೀದಿಸುತ್ತಿದ್ದರು. ಇಂತಹ ಕಡ್ಡಾಯದಿಂದ ಅಮೆರಿಕನ್ನರು ದಿನ ನಿತ್ಯದ ಅವಶ್ಯಕ ಪಾನೀಯ ಟೀಗೆ ಹೆಚ್ಚಿನ ಬೆಲೆ ತೆರಬೇಕಾಯಿತು. ಬ್ರಿಟನ್ನಿನ ಈ ಕರಾಳ ವರ್ತನೆಯನ್ನು ಅಮೆರಿಕನ್ನರು

ಸಹಿಸಲಾರದಾದರು. ಆದಾಗಲೇ ಬೋಸ್ಟನ್‌ಗೆ ಹಡಗಿನಲ್ಲಿ ತಂದಿದ್ದ ೩೪೨ ಟೀ ಪೆಟ್ಟಿಗೆಗಳನ್ನು ಸಮುದ್ರದಲ್ಲಿ ಮುಳುಗಿಸಿದರಲ್ಲದೆ ಹಡಗನ್ನೂ ಸುಟ್ಟುಹಾಕಿದರು. ಅಮೆರಿಕಾದ ಇತಿಹಾಸದಲ್ಲಿ ಅದೊಂದು ಯುಗಪ್ರವರ್ತಕ ಘಟನೆಯಾಗಲಿದೆಯೆಂದು ಅಂದಿನ ಪ್ರಮುಖರೊಬ್ಬರು ಭವಿಷ್ಯ ನುಡಿದಿದ್ದರು. ಮುಂದೆ ಅದೇ ಅಮೆರಿಕಾದಿಂದ ಬ್ರಿಟಿಷರನ್ನು ಓಡಿಸಲು ನಾಂದಿಯಾಯಿತು.

ಈ ಇತಿಹಾಸ ಗಾಂಧೀಜಿಯವರಿಗೆ ತಿಳಿಯದಿದ್ದುದ್ದೇನಲ್ಲ. ದೆಹಲಿಯಲ್ಲಿ ಗಾಂಧೀ-ಇರ್ವಿನ್ ಮಾತುಕತೆಗಳಾಗುತ್ತಿರುವ ಸಂದರ್ಭವೊಂದರಲ್ಲಿ ಇರ್ವಿನ್ ಒಂದು ಸಾರಿ ಗಾಂಧೀಜಿಯವರಿಗೆ ಟೀ ನೀಡುವ ಆಶಯ ವ್ಯಕ್ತಪಡಿಸಿದರಂತೆ. ಅವರಿಬ್ಬರೆದುರಿಗೆ ಟೀ ಕಪ್ಪುಗಳನ್ನು ತಂದಿರಿಸಿದರು. ಸಮಯ ಸ್ಫೂರ್ತಿ ಮತ್ತು ಹಾಸ್ಯ ಪ್ರಜ್ಞೆ ಗಾಂಧಿಜೀಯವರಲ್ಲಿ ಆಗ ಮೈದೋರಿರಬೇಕು. ತಮ್ಮ ಶಾಲಿನ ಮಡಿಕೆಯಲ್ಲಿ ಸದಾ ಇಟ್ಟುಕೊಂಡಿರುತ್ತಿದ್ದ ಚಿಕ್ಕ ಪೊಟ್ಟಣವನ್ನು ಹೊರತೆಗೆದರಂತೆ. ಇರ್ವಿನ್ನರನ್ನು ಕುರಿತು '' ಬೋಸ್ಟನ್ ಟೀ ಪಾರ್ಟಿಯ ವಿಷಯ ತಮಗೆ ಗೊತ್ತಿರಬೇಕಷ್ಟೆ. ಇದೋ ನೋಡಿ ದಾಂಡಿಯಲ್ಲಿ ನಾನು ತಯಾರಿಸಿದ ಉಪ್ಪು'' ಎಂದು ಹೇಳುತ್ತಾ ಒಂದು ಚಿಟಿಕೆ ಉಪ್ಪನ್ನು ತಮ್ಮ ಚಹಾಕಪ್ಪಿಗೆ ಹಾಕಿ ಕುಡಿಯಲಾರಂಭಿಸಿದರಂತೆ. ಗಾಂಧೀಜಿ ಎಬ್ಬಿಸಿದ ಹಾಸ್ಯ ಸನ್ನಿವೇಶದಲ್ಲಿ ಲಾರ್ಡ್ ಇರ್ವಿನ್ ಸಹ ಜತೆಗೂಡಿ ನಗದೆ ಇನ್ನೇನು ಮಾಡಲೂ ಸಾಧ್ಯವಾಗಲಿಲ್ಲ!

ಬೋಸ್ಟನ್‌ನಲ್ಲಿ ಚಹಾ ಪೆಟ್ಟಿಗೆಗಳು ಮತ್ತು ಹಡಗನ್ನು ನಾಶ ಮಾಡಿದ ಭಾಗವನ್ನು ಸ್ಮಾರಕವಾಗಿ ಇನ್ನೂ ಕಾಪಾಡಿಕೊಂಡಿದ್ದಾರೆ. ಅದೊಂದು ಪ್ರವಾಸಿಗರ ಆಕರ್ಷಕ ತಾಣವಾಗಿದೆ. ಉಪ್ಪಿನ ಸತ್ಯಾಗ್ರಹದ ಬಗೆಗೆ ಸ್ಮಾರಕವೇನಾದರೂ ಸ್ಥಾಪನೆಯಾಗಿದೆಯೋ ಎಂಬುದರ ಬಗೆಗೆ ತಿಳಿದಿಲ್ಲ. ಮಹಾತ್ಮಾಗಾಂಧೀ ದಾಂಡಿಯಾತ್ರೆ ಲಂಡನ್‌ನ್ನು ನಡುಗಿಸಿದ ಪ್ರಕರಣವಂತೂ ಇತಿಹಾಸದ ಪುಟಗಳಲ್ಲಿ ಅಡಗಿ ಕುಳಿತಿದೆ.

(ವಿವಿಧ ಮೂಲಗಳಿಂದ)

**(ಕೃಪೆ: ' ಸಂಯುಕ್ತ ಕರ್ನಾಟಕ' ದಿನಪತ್ರಿಕೆ)**

# ೨ ರಾಷ್ಟ್ರಪಿತ - ರಾಷ್ಟ್ರಪತಿ - ಜೋಗಜಲಪಾತ

ಶಿವಮೊಗ್ಗ ಜಿಲ್ಲೆಯ ಜೋಗದಲ್ಲಿ ೯೬೦ ಅಡಿಗಳಷ್ಟು ಎತ್ತರದಿಂದ ಧುಮುಕುವ ಶರಾವತಿ ನದಿ ನಯನ ಮನೋಹರ ದೃಶ್ಯ ಉಂಟುಮಾಡಿದೆ. ಅದೆಷ್ಟು ಸಾವಿರ ವರ್ಷಗಳಿಂದ ಈ ಜಲಧಾರೆ ಸುರಿಯುತ್ತಿದೆಯೋ ಹೇಳಲಾಗದು. ಅದರ ಸೊಗಸನ್ನು ನೋಡಿ ಆನಂದಿಸಲು ಪ್ರತಿದಿನ ಸಾವಿರಾರು ಜನ ಅಲ್ಲಿ ಸೇರುತ್ತಾರೆ. ಲಾರ್ಡ್ ಕರ್ಜನ್, ಭಾರತಕ್ಕೆ ವೈಸ್‌ರಾಯ್ ಆಗಿ ಬಂದ ಕೆಲವೇ ದಿನಗಳಲ್ಲಿ ಈ ದೃಶ್ಯವನ್ನು ನೋಡಲು ಜೋಗಕ್ಕೆ ಧಾವಿಸಿದ್ದನಂತೆ. ಆದರೆ, ನಮ್ಮವರೇ ಆದ ಸರ್. ಎಂ. ವಿಶ್ವೇಶ್ವರಯ್ಯನವರು ಈ ಜಲಪಾತವನ್ನು ಮೊದಲ ಸಾರಿ ನೋಡಿದಾಗ, ಅದೆಷ್ಟು ಶಕ್ತಿ ಇಲ್ಲಿ ಪೋಲಾಗುತ್ತಿದೆ ಎಂದು ಉದ್ಗರಿಸಿದ್ದರಂತೆ! ಬಹುಶಃ ಉದ್ಗಾರದ ಫಲದಿಂದಲೇ ಕನ್ನಡನಾಡಿಗೆ ಶಕ್ತಿ, ಬೆಳಕು ನೀಡುವ ಭಾಗೀರಥಿಯಾಯಿತು, ಆ ತನಕ ಆರ್ಭಟಿಸಿ ಹರಿದು ಸಮುದ್ರದ ಪಾಲಾಗುತ್ತಿದ್ದ ಶರಾವತಿ ನದಿ.

ಖಾದಿ ಪ್ರಚಾರಕ್ಕಾಗಿ ಮಹಾತ್ಮ ಗಾಂಧೀಯವರು ೧೯೨೭ರಲ್ಲಿ ಶಿವಮೊಗ್ಗಕ್ಕೆ ಬಂದಿದ್ದರು. ಅವರ ಜೊತೆ ರಾಜಾಜಿ, ಮಹದೇವ ದೇಸಾಯಿ, ಕಾಕ ಕಾಲೇಲ್ಕರ್, ಗಂಗಾಧರ ರಾವ್ ದೇಶಪಾಂಡೆ, ದೇವದಾಸ ಗಾಂಧಿ ಮೊದಲಾದ ಧುರೀಣರೂ ಇದ್ದರು. ಅವರು ಶಿವಮೊಗ್ಗದಲ್ಲಿರುವ ಸಮಯದಲ್ಲಿ ಜೋಗದ ಜಲಪಾತವನ್ನು ವೀಕ್ಷಿಸುವ ಏರ್ಪಾಡನ್ನು ಸ್ಥಳೀಯ ವ್ಯವಸ್ಥಾಪಕರು ಮಾಡಿದ್ದರು. ಗಾಂಧೀಯವರ ಸಂಗಡಿಗರಿಗೆ ಅಲ್ಲಿಯ ವಿಶ್ವವಿಖ್ಯಾತ ನಯನ-ಮನೋಹರ ದೃಶ್ಯವನ್ನು ನೋಡಲು ಆಕಾಂಕ್ಷೆಯೂ ಇದ್ದಿರಬೇಕು. ಅವರೆಲ್ಲರೂ ಗಾಂಧೀಜಿಯವರೊಡನೆ ಜೋಗಿಗೆ ಪ್ರಯಾಣ ಮಾಡುವ ವಿಷಯವನ್ನು ಪ್ರಸ್ತಾಪಿಸಿದರಂತೆ. ತಾವು ಅಲ್ಲಿಗೆ ಹೋಗುವುದಿಲ್ಲವೆಂದರು ಗಾಂಧೀಜಿ. ಜೋಗ್ ಜಲಪಾತದ ವೈಶಿಷ್ಟ್ಯಗಳ ವರ್ಣನೆ ಮಾಡಿದರು. ಪ್ರಪಂಚದಲ್ಲೇ ಅತ್ಯಂತ ಹೆಚ್ಚು ಎತ್ತರದಿಂದ ಧುಮುಕುವ, ಲಾರ್ಡ್ ಕರ್ಜನ್‌ರು ಈಗಾಗಲೇ ನೋಡಿ ಆನಂದಿಸಿದ ವಿಷಯ ಅರುಹಿದರು. ಹಾಗಾದರೆ, ಮಳೆ ನೀರು ಎಷ್ಟು ಎತ್ತರದಿಂದ ಬೀಳುತ್ತದೆ, ಅದೂ ಅಚ್ಚರಿಯಲ್ಲವೇ, ಎಂದು ಗಾಂಧಿ ತಮ್ಮ ಸಹಚರರನ್ನು ಛೇಡಿಸಿದರು. ಅವರ ಆಪ್ತಕಾರ್ಯದರ್ಶಿ ಮಹದೇವ ದೇಸಾಯಿಯವರನ್ನಾದರೂ ಕಳುಹಿಸಿಕೊಡಿ ಎಂದು ಪ್ರಾರ್ಥಿಸಿದರು. ಇಲ್ಲ, ಅದಕ್ಕೂ ನಕಾರ. ಅಂದು ಅವರಿಬ್ಬರಿಗೂ ಮಹತ್ವದ ಕೆಲಸಗಳಿವೆ. ಬ್ರಿಟಿಷರ ವಿರುದ್ಧ ಹೋರಾಡುವ ಆಯುಧಗಳನ್ನು ಸಾಣೆ ಹಿಡಿದು ಜಳಪಿಸುವ ದಿನ ಅದು! ಅರ್ಥಾತ್ "ಯಂಗ್ ಇಂಡಿಯಾ" ಮತ್ತು "ನವಜೀವನ" ಪತ್ರಿಕೆಗಳಿಗೆ ಅವರು ಪ್ರತಿವಾರ ಕಳುಹಿಸುವ ಲೇಖನಗಳು ಅಂದೇ ತಯಾರಾಗಬೇಕು. ಅಂದು ಅವರ ಬರವಣಿಗೆ ನಿಂತರೆ ಒಂದುವಾರ ಯುದ್ಧವಿರಾಮವಾದಂತೆಯೇ!

ದೇಶದ ಸ್ವಾತಂತ್ರ್ಯ ಗಳಿಸುವ ಆಂದೋಲನದ ಸೇನಾನಿ, ಪ್ರೇಕ್ಷಣೀಯ ಸ್ಥಳಗಳಲ್ಲಿ ಕಣ್ಣಿನಗಳನ್ನು ತಣಿಸಿಕೊಳ್ಳುತ್ತಾ ಕಾಲ ಕಳೆಯುತ್ತಿದ್ದರೆ ಅವನ ಅನುಯಾಯಿಗಳು ಹಾಗೇ

ಮಾಡುತ್ತಾರಲ್ಲವೇ? ಮುಂದೆ ದೇಶದ ಗತಿ ಏನಾಗುತ್ತದೆ. ಸ್ವಯಂ ತ್ಯಾಗವೇ ಅವರ ರಾಜ ಮಾರ್ಗ. ದೇಶಕ್ಕೆ ಸ್ವಾತಂತ್ರ್ಯ ಗಳಿಸಿಕೊಟ್ಟು ಹಂತಕನ ಗುಂಡಿಗೆ ಬಲಿಯಾಗುವವರೆಗೂ ರಾಷ್ಟ್ರದ ಒಳಿತನ್ನು ಬಿಟ್ಟು ಅವರು ಬೇರೆ ಏನನ್ನು ಯೋಚಿಸಲಿಲ್ಲ; ಮತ್ತೇನನ್ನೂ ಮಾಡಲಿಲ್ಲ. ಇಷ್ಟಪಟ್ಟಿದ್ದರೆ ರಾಷ್ಟ್ರಪತಿಯೋ, ಪ್ರಧಾನಿಯೋ ಆಗಬಹುದಿತ್ತು. ಸ್ವಾತಂತ್ರ್ಯ ದಿನದ ಸಂಭ್ರಮದಲ್ಲಿ ನಾಡೆಲ್ಲಾ ಹಬ್ಬ ಆಚರಿಸುತ್ತಿದ್ದಾಗ, ಬಂಗಾಳದಲ್ಲಿ ಹಿಂಸೆಗೊಳಗಾದವರಿಗೆ ಸಾಂತ್ವನ ನೀಡುತ್ತಾ ಉಪವಾಸ ವ್ರತದಲ್ಲಿ ತೊಡಗಿದ್ದರು ಗಾಂಧೀಜಿ. ಮುಂದೆ, ಅವರು ಹುತಾತ್ಮರಾದಾಗ ಅವರನ್ನೇ ನಮ್ಮ ''ರಾಷ್ಟ್ರಪಿತ'' (ಫಾದರ್ ಆಫ್ ದಿ ನೇಷನ್) ಎಂದು ಹಾಡಿ ಹೊಗಳಿದೆವು.

ಕಳೆದ ತಿಂಗಳು ಜೋಗದ ಜಲಪಾತಕ್ಕೆ ರಾಷ್ಟ್ರದ ಗಣ್ಯರೊಬ್ಬರ ಭೇಟಿಯ ವಿಷಯ ಈ ಕಡೆ ಮನೆಮಾತಾಯಿತು. ಅದು, ರಾಷ್ಟ್ರದ ಅತ್ಯುನ್ನತ ಹುದ್ದೆಯಲ್ಲಿರುವ 'ರಾಷ್ಟ್ರಪತಿ' ಗಳ (ಪ್ರೆಸಿಡೆಂಟ್ ಆಫ್ ದಿ ನೇಷನ್) ಭೇಟಿ. ಈ ವರ್ಷದ ಮಳೆಯ ಸಮೃದ್ಧಿಯಿಂದ ಶರಾವತಿ ಉಕ್ಕಿ ಹರಿಯಿತು. ಜಲಪಾತ ತನ್ನ ಹಿಂದಿನ ವೈಭವದಿಂದ ಮೆರೆಯಿತು. ಮಳೆ ನಿಂತ ಮೇಲೆ ಜಲಾಶಯದ ನೀರಿನ ಮಟ್ಟವು ಇಳಿಯಲಾರಂಭಿಸಿತು. ಈ ಸಮಯದಲ್ಲೇ ಕರ್ನಾಟಕ ಇನ್ನೊಂದು ವಿಶ್ವವಿಖ್ಯಾತ ಉತ್ಸವದ ತಯಾರಿಯಲ್ಲಿತ್ತು. ಅರಸೊತ್ತಿಗೆ, ರಾಜ-ಮಹಾರಾಜರ ದರ್ಬಾರು, ಪ್ರಜಾಪ್ರಭುತ್ವದ ನಮ್ಮ ಗಣರಾಜ್ಯದಲ್ಲಿ ಇರಕೂಡದೆಂದು, ಬ್ರಿಟಿಷರನ್ನು ತೊಲಗಿಸಿದ ಕೂಡಲೇ ಅವರನ್ನೂ ಮನೆಗೆ ಕಳುಹಿಸಿದೆವು. ಈಗ ರಾಜ-ಮಹಾರಾಜರಿಲ್ಲದಿದ್ದರೇನಂತೆ, ಅವರು ನಡೆಸುತ್ತಿದ್ದ ವೈಭವದ ಉತ್ಸವ, ಮೆರವಣಿಗೆ ದರ್ಬಾರು, ಪಂಜಿನ ಕುಣಿತ ಯಾರಿಗೆ ಬೇಡ? ನಾಡಿನಲ್ಲಿ ಅನಾವೃಷ್ಟಿ, ಬರಗಾಲ, ಬಡತನಗಳು ತಾಂಡವವಾಡುತ್ತಿರುವಾಗಲೂ ಪ್ರತಿವರ್ಷ ದಸರಾ ಮಹೋತ್ಸವವನ್ನು ಸರ್ಕಾರವೇ ಅದ್ದೂರಿಯಿಂದ ನಡೆಸುತ್ತಿದೆ. ದೇಶ- ವಿದೇಶಗಳ ಗಣ್ಯರನ್ನು ಆಹ್ವಾನಿಸಿ, ಅವನ್ನೆಲ್ಲ ತೋರಿಸಿ ಶಹಭಾಷಗಿರಿ ಪಡೆಯುತ್ತಾರೆ. ಈ ವರ್ಷದ ಗಣ್ಯ ಅತಿಥಿ ನಮ್ಮ ರಾಷ್ಟ್ರಾಧ್ಯಕ್ಷರು (ರಾಷ್ಟ್ರಪತಿ) ಶ್ರೀಯುತ ರಾಮಸ್ವಾಮಿ ವೆಂಕಟರಾಮನ್.

ಕರ್ನಾಟಕ ಸರ್ಕಾರ ಇಲ್ಲಿಯ ಉತ್ಸವಗಳಲ್ಲಿ ಭಾಗವಹಿಸಲು ಅವರನ್ನು ಕೇಳಿಕೊಂಡಿರಬೇಕು. ಅವರು ಪರಿವಾರ ಸಮೇತ ವಾಯುಮಾರ್ಗದಲ್ಲಿ ಮೈಸೂರನ್ನು ತಲುಪಿದರು. ವಿಜಯದಶಮಿಯ ದಿನ ಜಂಬು ಸವಾರಿಯನ್ನು ಉದ್ಘಾಟಿಸಿದರು. ಪ್ರೇಕ್ಷಣೀಯ ಸ್ಥಳಗಳಿಗೂ ಭೇಟಿ ಕೊಟ್ಟರು. ಸರ್ಕಾರ ಇನ್ನು ಅವರಿಗೆ ಜಗತ್ಪ್ರಸಿದ್ಧ ಜೋಗದ ಜಲಪಾತವನ್ನು ತೋರಿಸದಿರುವುದಕ್ಕಾಗುತ್ತದೆಯೇ?

ಜೋಗದ ಜಲಪಾತ ಇನ್ನೂ ಉಳಿದುಕೊಂಡಿರುವ ಅಲ್ಪಸ್ವಲ್ಪ ಕಾಡಿನ ಮಧ್ಯೆ ಇರುವ ದುರ್ಗಮ ಪ್ರದೇಶವಾಗಿಯೇ ಇದೆ. ಅಲ್ಲಿಗೆ ಗಣ್ಯರನ್ನು ಕರೆತಂದು, ಕಳಿಸುವುದು ಸುಲಭದ ಕೆಲಸವಲ್ಲ. (ದಿನಂಪ್ರತಿ ಅಲ್ಲಿಗೆ ಹೋಗುವ ಸಾವಿರಾರು ಶ್ರೀಸಾಮಾನ್ಯರು ಪಡುವ ಬವಣೆ ಸ್ವತಃ ಅಲ್ಲಿಗೆ ಹೋಗಿ ಅನುಭವಿಸಬೇಕು.) ೩-೪ ವಾರ ಸರ್ಕಾರದ ಎಲ್ಲಾ ಆಡಳಿತ ಯಂತ್ರಗಳು ತಮ್ಮ ಗಮನ ಆ ಕಡೆ ಹರಿಸಬೇಕಾಯಿತು. ಅಕ್ಕಪಕ್ಕದ ಜಿಲ್ಲೆಯ ಹಿರಿ-ಕಿರಿಯ ಅಧಿಕಾರಿಗಳು ಅಲ್ಲಿಗೆ ಧಾವಿಸಬೇಕಾಯಿತು. ಎಂದೂ ರಿಪೇರಿಯಾಗದ ರಸ್ತೆಗಳ ದುರಸ್ತಿಕಾರ್ಯ ಭರದಿಂದ ಸಾಗಿತು. ಸರ್ಕಾರಿ ಗಣ್ಯರಿಗೆ ಮೀಸಲಾಗಿದ್ದ ಅತಿಥಿ ಗೃಹಗಳಿಗೆ ಸುಣ್ಣ ಬಣ್ಣ ಬಳಿದು ಅಲಂಕರಿಸಲಾಯಿತು.

ರಕ್ಷಣಾ ವ್ಯವಸ್ಥೆಗೆ ಅತ್ಯಂತ ಹೆಚ್ಚಿನ ಮಹತ್ವ ಕೊಡಬೇಕಾದುದು ಅನಿವಾರ್ಯವೇ. ಜಲಪಾತದ ಬೋರ್ಗರೆಯುವ ಶಬ್ದದ ಜೊತೆ ಸರ್ಕಾರಿ ವಾಹನಗಳ ತಿರುಗಾಟದ ಆರ್ಭಟವೂ ಧ್ವನಿಗೂಡಿಸಿತು. ಅಷ್ಟರಲ್ಲಿ ಮಳೆಯ ಪ್ರಮಾಣ ಕಡಿಮೆಯಾಗಿದ್ದರಿಂದ ರಾಷ್ಟ್ರಪತಿಗಳಿಗೆ ಜಲಪಾತದ ಹಿಂದಿನ ವೈಭವವನ್ನು ತೋರಿಸಲು ಅಣೆಕಟ್ಟಿನಲ್ಲಿ ವಿದ್ಯುತ್ ಉತ್ಪಾದನೆಗಾಗಿ ಶೇಖರಗೊಂಡ ನೀರಿನ ಸ್ವಲ್ಪ ಭಾಗವನ್ನು ಜಲಪಾತದ ಕಡೆಗೆ ಹರಿದು ಬಿಡಬೇಕಾಯಿತು ಕೂಡ.

ಸೆಪ್ಟೆಂಬರ್ ೩೦ರಂದು ರಾಷ್ಟ್ರಪತಿಗಳ ಪರಿವಾರ, ಮಂತ್ರಿಮಹೋದಯರೊಂದಿಗೆ ಹೆಲಿಕ್ಯಾಪ್ಟರ್‌ಗಳಲ್ಲಿ ಜೋಗಕ್ಕೆ ಬಂದಿಳಿದರು. ಈ ಸಲುವಾಗಿಯೇ ಹೆಲಿಪ್ಯಾಡ್ ಸಹ ಮೊದಲೇ ತಯಾರಾಗಿತ್ತು. ಅವರ ಪರಿವಾರ, ಮಂತ್ರಿಮಹೋದಯರೇ ಅಲ್ಲದೆ ಸರ್ಕಾರಿ ಅಧಿಕಾರಿಗಳು ಮತ್ತು ಪರಿವಾರದವರೂ ಆ ದಿನ ಹಗಲಲ್ಲಿ ಜೋಗದ ಜಲಪಾತದ ನಯನ - ಮನೋಹರ ದೃಶ್ಯವನ್ನು ನೋಡಿದರು. ಜೊತೆಗೆ ರಾತ್ರಿ ಹೊತ್ತು ಬಾಣ - ಬಿರುಸುಗಳ ಬೆಳಕಿನಲ್ಲಿ ಜಲಪಾತ ದೃಶ್ಯ ಇನ್ನೂ ಮನೋಹರವಾಗಿರುತ್ತದಂತೆ. ಬಾಣ-ಬಿರುಸುಗಳ ಬೆಳಕು, ಪಟಾಕಿಗಳ ಸದ್ದಿನಲ್ಲೂ ರಾಷ್ಟ್ರಪತಿಗಳು ಜಲಪಾತದ ಸೊಬಗನ್ನು ನೋಡಿ ತಣಿದಿರಬೇಕು. (ಅದು ನಿರೀಕ್ಷಿತ ಪರಿಣಾಮ ಉಂಟುಮಾಡಲಿಲ್ಲವೆಂಬ ಕೊರಗು ನಮ್ಮ ಸರ್ಕಾರದ ಗಣ್ಯರನ್ನು ಚಿಂತೆಗೀಡು ಮಾಡಿರಲು ಸಾಕು!)

ಜೋಗ ಜಲಪಾತದ ಹತ್ತಿರದವರೆಗೂ ದೇಶದ ಕಾರ್ಯಕ್ಕಾಗಿ ಬಹಳ ಹಿಂದೆ ಆಗಮಿಸಿದ್ದರೂ, ಅದನ್ನು ನೋಡಲು ನಿರಾಕರಿಸಿದ ಗಾಂಧೀಜಿಯವರ ಜನ್ಮದಿನ ಅಕ್ಟೋಬರ್ ೨ರಂದು. ಕೇವಲ ಎರಡು ದಿನಗಳ ಹಿಂದೆ ದೆಹಲಿಯಿಂದ ಮೈಸೂರು, ಜೋಗಗಳಿಗೆ ಭಾರತದ ಶ್ರೀಸಾಮಾನ್ಯರ ಖರ್ಚಿನಿಂದ ಹಾರಿಬಂದು ಕಣ್ಮನಗಳನ್ನು ತಣಿಸಿಕೊಂಡಿದ್ದ ಸ್ವತಂತ್ರ ಭಾರತದ ರಾಷ್ಟ್ರಪತಿಗಳು, ಅತ್ಯಂತ ಭಕ್ತಿ-ಭಾವ, ನಮ್ರತೆಯಿಂದ ರಾಜಘಾಟ್‌ನಲ್ಲಿ ರಾಷ್ಟ್ರಪಿತನ ಸಮಾಧಿಗೆ ಪುಷ್ಪಾಂಜಲಿ ಅರ್ಪಿಸಿದ್ದನ್ನು ರಾಷ್ಟ್ರದಾದ್ಯಂತ ಜನಸಾಮಾನ್ಯರು ನೋಡಿ ಹರ್ಷಿತರಾದರು. ಜೊತೆಗೆ ಆ ದಿನವೇ ಅತ್ಯಂತ ಸರಳ ಹಾಗೂ ಪ್ರಾಮಾಣಿಕ ವ್ಯಕ್ತಿಗಳೆಂದು ಖ್ಯಾತರಾಗಿದ್ದ ದಿವಂಗತ ಲಾಲ್ ಬಹದ್ದೂರ್ ಶಾಸ್ತ್ರಿ ಹಾಗೂ ಕಾಮರಾಜರ ಸ್ಮಾರಕಗಳಿಗೂ ನಮಿಸಿ ಕೃತಾರ್ಥರಾದರು!

ಮೋಹನದಾಸ ಕರಮಚಂದ ಗಾಂಧಿ ತನ್ನ ಜೀವಮಾನವೆಲ್ಲ ಶ್ರಮಿಸಿದ್ದು ಭಾರತವನ್ನು ಬ್ರಿಟಿಷರ ದಾಸ್ಯದಿಂದ ವಿಮುಕ್ತಿಗೊಳಿಸುವುದಕ್ಕೆ ಮಾತ್ರವಲ್ಲವೆಂಬುದು ಸರ್ವವೇದ್ಯ. ಬ್ರಿಟಿಷರು ತೊಲಗಿ, ನಮ್ಮವರ ಕೈಗೆ ಅಧಿಕಾರ ಬಂದರೆ ಬ್ರಿಟಿಷ್ ಆಡಳಿತದಲ್ಲಿ ಅವರ ಆಡಂಬರ, ವೈಭವಗಳನ್ನು ತ್ಯಜಿಸಿ, ಕೊಳ್ಳೆ ಹೊಡೆಯುತ್ತಿದ್ದ ರಾಷ್ಟ್ರೀಯ ಸಂಪತ್ತನ್ನು, ನಮ್ಮ ಬಡಜನರ ಉದ್ಧಾರಕ್ಕೆ ವಿನಿಯೋಗಿಸಲು ಸಾಧ್ಯವಾಗುತ್ತದೆಂಬುದು ಅವರ ಮುಖ್ಯ ಉದ್ದೇಶವಾಗಿತ್ತು. ಆದರಿಂದಲೇ ಅವರು ಅರೆಬೆತ್ತಲೆಯ ಫಕೀರರಾಗಿ ತಿರುಗಾಡಿದರು; ತೀರಾ ಸರಳ ಆಹಾರ ಅವರದಾಗಿತ್ತು. ಬಡಜನತೆಯ ಉದ್ಧಾರಕ್ಕೆ ಸಹಕಾರಿಯಾಗುತ್ತದೆಂದು ಖಾದಿಯನ್ನು ಪ್ರೋತ್ಸಾಹಿಸಿದರು. ಅಸ್ಪೃಶ್ಯರನ್ನು ದೇವರ ಮಕ್ಕಳು (ಹರಿಜನ) ಎಂದು ಪರಿಗಣಿಸಿ ಅವರ ಉದ್ಧಾರಕ್ಕೆ ಶ್ರಮಿಸಿದರು. ಮೂರನೆಯ ದರ್ಜೆಯ ರೈಲಿನಲ್ಲೇ ಪ್ರಯಾಣ ಮಾಡುತ್ತಿದ್ದರು. ತಮಗಾಗಲೀ ತಮ್ಮ ಸಂಬಂಧಿ

ಗಳಿಗಾಗಲೀ ಪ್ರತ್ಯಕ್ಷ ಇಲ್ಲವೇ ಪರೋಕ್ಷವಾಗಿಯಾಗಲೀ ತಮ್ಮ ಸ್ಥಾನದಿಂದ ಪ್ರಯೋಜನಗಳಾದಂತೆ ಎಚ್ಚರ ವಹಿಸಿದರು.

ಪಂಜಾಬ್, ಕಾಶ್ಮೀರ, ಆಸ್ಸಾಂಗಳಲ್ಲಿ ಈಗ ಸಮಾರೋಪಾದಿಯ ಪ್ರಕ್ಷುಬ್ಧ ಪರಿಸ್ಥಿತಿ ಇದೆ. ರಾಷ್ಟ್ರಾದ್ಯಂತ ಒಂದಲ್ಲ ಒಂದು ಕಾರಣದಿಂದ ವ್ಯಾಪಕ ಹಿಂಸಾಚಾರ ಕೊಲೆ, ಆಸ್ತಿ- ಪಾಸ್ತಿಗಳ ನಾಶವಾಗುತ್ತಿವೆ. ರಾಷ್ಟ್ರಪತಿಗಳಂಥ ಹಿರಿಯ ಮುತ್ಸದ್ದಿಗಳು ಜನರಲ್ಲಿ ಭುಗಿಲೆದ್ದ ಭಾವನೆಗಳನ್ನು ತಣಿಸಲು ಪ್ರಯತ್ನಿಸಬಹುದು ; ಶಾಂತಿ ಸಂದೇಶಗಳ ವಾಹಕರಾಗಬಹುದು. ಅರಬ್ ದೇಶಗಳಲ್ಲಾಗುತ್ತಿರುವ ಆತಂಕಕಾರಿ ಬೆಳವಣಿಗೆಗಳಿಂದ ನಮ್ಮ ರಾಷ್ಟ್ರದ ಪ್ರಗತಿ ಹಾಗೂ ರಕ್ಷಣೆಗೆ ಅವಶ್ಯಕವಾದ ಪೆಟ್ರೋಲಿಯಂ ವಸ್ತುಗಳ ಸರಬರಾಜು ಈಗಾಗಲೇ ಕಡಿಮೆಯಾಗುತ್ತಿದೆ. ಇವಾವುಗಳ ಅರಿವು ಇಲ್ಲದವರಂತೆ ಗಣ್ಯರಿಗೆ ಪ್ರೇಕ್ಷಣೀಯ ದೃಶ್ಯಗಳನ್ನು ತೋರಿಸಲು ಮಾಡಿದ ಏರ್ಪಾಡುಗಳಿಗೆ ಆದ ಪೆಟ್ರೋಲಿನ ಖರ್ಚು ಎಷ್ಟಿರಬಹುದೆಂಬುದರ ಅಂದಾಜು, ವಾಹನಗಳ ತಿರುಗಾಡಿದ ರಸ್ತೆಗಳಿಗೆ ಮಾತ್ರ ತಿಳಿದಿರಬಹುದು. ಜೋಗದಲ್ಲಿನ ಏರ್ಪಾಡುಗಳಿಗೆ ಸುಮಾರು ೩-೪ ಕೋಟಿ ರೂಪಾಯಿಗಳಾಗಿರಬಹುದೆಂಬುದು ಸುತ್ತ-ಮುತ್ತಲ ಜನರ ಅಂಬೋಣ!

ಸ್ವಾತಂತ್ರ್ಯ ನಂತರ ಭಾರತದಲ್ಲಿ ಉನ್ನತ ಹುದ್ದೆಗಳಲ್ಲಿರುವಂತ ರಾಜ್ಯಪಾಲರು ಗುಡಿಸಲುಗಳಲ್ಲಿ ವಾಸ ಮಾಡಬೇಕು ಅನ್ನುತ್ತಿದ್ದರು ಗಾಂಧೀಜಿ. ಬಹುಶಃ ಅವರೆಲ್ಲಾ ಅರ್ಥಾತ್ ಗುಡಿಸಲುಗಳಲ್ಲಿ ಇರಬೇಕೆಂಬುದು ಅವರ ಆಶಯವಾಗಿರಲಾರದು. ಅಂತಹವರು ಸರಳ ಜೀವನ ನಡೆಸಿ, ಇತರರಿಗೆ ಮಾರ್ಗದರ್ಶಿಗಳಾಗಬೇಕೆಂಬುದು ಅವರ ಆಶಯವಾಗಿತ್ತಷ್ಟೆ ಈಗ ಅಂತಹ ಹುದ್ದೆಯ ಜನ ಪ್ರತಿನಿಧಿಗಳ ಐಶಾರಾಮ ಜೀವನ ಶೈಲಿ ಬಗೆಗೆ ಹೆಚ್ಚು ಹೇಳಬೇಕಾಗಿಲ್ಲ. ರಾಷ್ಟ್ರಪತಿಗಳಂಥವರು ನಿವೃತ್ತರಾದ ನಂತರವೂ ಘನತೆ, ಗೌರವದ ಜೀವನ ಸಾಗಿಸಲು ಸರ್ಕಾರ ಶಾಸನಬದ್ಧವಾಗಿ ಸೂಕ್ತ ಮಾಶಾಸನ, ವಸತಿ ಮತ್ತಿತರ ಸೌಲಭ್ಯಗಳನ್ನೊದಗಿಸುತ್ತದೆ. ಇಂತಹ ಸೌಲಭ್ಯಗಳಿದ್ದವರೊಬ್ಬರಿಗೆ ಇತ್ತೀಚೆಗೆ ಕರ್ನಾಟಕ ಸರ್ಕಾರ ಇರುವ ಸೌಲಭ್ಯಗಳ ಜೊತೆಗೆ ಬೆಂಗಳೂರಲ್ಲಿ ಉಚಿತ ವಸತಿ, ಮತ್ತಿತರ ಸೌಲಭ್ಯಗಳನ್ನು ಹೆಚ್ಚುವರಿಯಾಗಿ ಒದಗಿಸಿದ್ದು ಈಗ ಜನಜನಿತವಾಗಿದೆ. ಲಾಲ್ ಬಹದ್ದೂರ್ ಶಾಸ್ತ್ರಿಗಳು ಪ್ರಧಾನ ಮಂತ್ರಿಗಳಾಗಿದ್ದಾಗ ತಮ್ಮ ಖಾಸಗಿ ಪ್ರಯೋಜನಗಳಿಗಾಗಿಯೇ ವಾಯುಪಡೆ ವಿಮಾನಗಳಲ್ಲಿ ಸಂಚರಿಸಿದಾಗ ಅದರ ಖರ್ಚುವೆಚ್ಚಗಳನ್ನು ತಮ್ಮ ಸ್ವಂತ ಲೆಕ್ಕದಿಂದ ಕೊಡುತ್ತಿದ್ದರಂತೆ. ವಿಶ್ವೇಶ್ವರಯ್ಯನವರು ಜೋಗದ ಜಲಪಾತವನ್ನು ನೋಡಿದಾಗ ಅಲ್ಲಿ ಶಕ್ತಿಯ ಪೋಲಾಗುತ್ತಿದೆ ಎಂದಿದ್ದರಂತೆ. ಈಗ ಅಲ್ಲಿ ಶಕ್ತಿಯ ಜೊತೆ ಅಪಾರ ಹಣ ವ್ಯಯವನ್ನೂ ಮಾಡುತ್ತಿದ್ದೇವೆ. ಅಂದರೆ ನಾವೀಗ ಬಹಳಷ್ಟು ಮುಂದುವರಿದಿದ್ದೇವೆ, ಅಲ್ಲವೇ? '' ಸಬಕೋ ಸನ್ಮತಿ ದೇ ಭಗವಾನ್!''

(ಕೃಪೆ: 'ಸಂಜೆ ಸಮಾಚಾರ', ಮೈಸೂರು
೧೪-೧೦-೧೯೯೦)

## ೩ ಸಭ್ಯತಾ ದೇವತೆ

(ಹರಿಜನೋದ್ಧಾರ ಕಾರ್ಯಕ್ಕಾಗಿ ಗಾಂಧೀಜಿ ಮೈಸೂರಿಗೆ ಬಂದಾಗ ರಚಿಸಿದ್ದು)

ಮನುಜರಲಿ ದೇವತ್ವದಾಕಾಂಕ್ಷೆಯಳಿದಿಲ್ಲ;
ಉಳಿದಿಹುದು; ದಿನದಿನಕೆ ಬೆಳೆಯುತಿದೆ; ಎಂಬುದಕೆ
ಸಾಕ್ಷಿಯಿದು: ದಶದಶ ಸಹಸ್ರ ಜನ ಕಿಕ್ಕಿರಿದು
ನೆರೆದಿಹುದು ಬಿಸಿಲಿನಲಿ ಮಾನವ ಮಹಾತ್ಮನಿಗೆ
ಗೌರವಾರಾಧನೆಯ ನೈವೇದ್ಯವನು ಸಲಿಸೆ!
ಇವನು ಕಲ್ಲನು ರೊಟ್ಟಿಮಾಡಿಲ್ಲ; ಹುಲ್ಲಿನಲಿ
ನಿಶಿತಾಸ್ತ್ರವನು ಮಂತ್ರದಿಂ ರಚಿಸಿ ದಾನವನ
ಕೊಂದಿಲ್ಲ; ಅರ್ಧನರ ಅರ್ಧಮೃಗ ರೂಪದಲಿ
ಕಂಭವನ್ನೊಡೆದು ಗುಡುಗುಡಿಸಿ ಮೂಡಿದನಿಲ್ಲ;
ದಶಶಿರನ ಕೊಂದಿಲ್ಲ; ಚಕ್ರಧರನೂ ಅಲ್ಲ.
ಅದ್ಭುತ ಪವಾಡಗಳ, ಅಘಟಿತ ವಿಚಿತ್ರಗಳ
ಗೋಜಿಗಿವನೆಂದಿಗೂ ಹೋಗುವಾತನೆ ಅಲ್ಲ!
ಮತ್ತಾವ ದೇವತ್ವದೀಕ್ಷಣೆಗೆ ನೆರೆದಿಹರ್
ಇನಿತು ಮನುವಂಶಜರ್?– ನೋಡತಿಂದೆಂಬೆಯೇನ್?
ಆನೆಯಂಬಾರಿಗಳ ರಾಜರೈಸಿರಿಯಿಲ್ಲ;
ಇವನು ಸುಂದರನಲ್ಲ; ಯುವಕನಂತೂ ಅಲ್ಲ;
ಮುದುಕನಾಗಿಹನು; ಹಲ್ಲುಗಳುದುರಿ ಬಾಯಿ ಬರಿ
ಬೋಡಾಗಿಹುದು. ಇವಗೆ ಚೆಂದುಟಿಯ ಚೆಲುವಿಲ್ಲ;
ಕಮಲಾಕ್ಷನಿವನಲ್ಲ. ಮತ್ತೇಕೆ?– ಮೃದುಮಧುರ
ವಾಗ್ವಿಲಾಸಕೆ ಸೋತು ಎಂಬೆಯೇನ್? ಅದೂ ಸುಳ್ಳು!
ಇವನ ದನಿ ದೂರಕ್ಕೆ ಕೇಳಿಸದು; ಮಾತಿನಲಿ
ರಸಿಕತೆಯ ಬೆಡಗು ಬಿಂಕಗಳಿಲ್ಲ; ಓಜಸ್ಸು
ವಿನ್ಯಾಸ ವೈಖರಿಗಳಿನಿತಿಲ್ಲ; ವಿಷಯವೋ
ಬೀದಿ ಗುಡಿಸುವ ಜಾಡುಮಾಲಿಗಳ ಕುರಿತದ್ದು!
ಹಿಮಗಿರಿಯ ಭವ್ಯ ಸೌಂದರ್ಯವನ್, ಗಗನವನೆ
ಚುಂಬಿಪ ತುಷಾರಮಯ ಗಿರಿ ಶಿರ ತರಂಗಗಳ
ರಮಣೀಯ ಕಮನೀಯ ಭೀಷ್ಮಸಂಮೋಹವನ್
ಕುರಿತಿವನು ನುಡಿವನಲ್ಲ, ಅಥವಾ ಸಾಗರದ
ಸುಂದರ ಸುನೀಲ ಸಲಿಲದ ನೃತ್ಯ ಮಹಿಮೆಯನ್

ಮಾತಿನಲಿ ತೋರಲೆಳಸುವ ವಾಗ್ಮಿಯಿವನಲ್ಲ,
ಚೈತ್ರವೈಶಾಖಾದಿ ಮಾಸಗಳ, ಪುಷ್ಪಗಳ,
ಪಕ್ಷಿಗಳ, ತರಲತಾಗುಲ್ಮಗಳ, ವರ್ಷಗಳ
ಕುರಿತು ಮಂಜುಳ ಶೈಲಿಯಲಿ ವರ್ಣಿಸುವ ಸರಸ
ಕಾವ್ಯರ್ಷಿಯಿವನಲ್ಲ ಇವನು ಹೇಳುವ ವಿಷಯ,
ಇವನ ಮೇಣ್ ಇವನ ಮಾತಿನ ತೆರದಿ, ದಿನದಿನದ
ಸರಳ ಸಾಧಾರಣ ಬಡಹೊಟ್ಟೆ ಪಾಡಿನದು!

ಆದರೂ ದರ್ಶನಕೆ ಮುತ್ತಿಹರು ಮಾನವರು,
ಜೇನುಹುಟ್ಟಿಗೆ ಜೇನುಹುಳು ಕವಿಯುವಂದದಲಿ,
ಐಸಿರಿ ಪವಾಡ ವಾಗ್ಮಿತೆಗಳನು ಲೆಕ್ಕಿಸದೆ,
ಪ್ರೇಮ ಸತ್ಯಾಹಿಂಸೆ ಸಮತೆಗಳನಾಚರಿಸಿ,
ಬೋಧಿಸುವ, ಸಾಧಿಸುವ, ಜನರನೆಚ್ಚರಗೊಳಿಪ
ಸರಳ ಜೀವನದ ದೇವತ್ವದಾರಾಧನೆಗೆ!
ವೈಚಿತ್ರ್ಯವನೆ ದೇವರೆಂದೆಂಬುವಾ ಕಾಲ
ಒಂದಿತ್ತು, ಮತ್ಸ್ಯ ಕೂರ್ಮಾದಿ ನರಸಿಂಹರನು
ಭಯಭಕ್ತಿ ಪೂಜಿಸುವ ಕಾಲವೊಂದಿತ್ತು;
ರಾಜದರ್ಪದಲಿ, ಅಧಿಕಾರದಲಿ, ಕ್ರೌರ್ಯದಲಿ,
ಶಕ್ತಿ ಬಲ ಯುಕ್ತಿ ಸಿರಿ ಮೇಣ್ ಅಹಂಕಾರದಲಿ
ದೇವತ್ವವನು ಕಾಣುವಾ ಕಾಲವೊಂದಿತ್ತು.
ಆ ಅನಾಗರಿಕ ಮಾನವ ದೇವಭಾವಗಳ್
ಇಂದು ದೂರಾಗುತಿವೆ. ಮಾನವನ ಅಭ್ಯುದಯ
ಶ್ರೇಯಸ್ಸುಗಳಿಗಾಗಿ ನೊಂದವರ್, ಬೆಂದವರ್,
ಮನುಜರಂತೆಯೆ ಬಾಳಿ ಹೋರಾಡಿ ಸಂದವರ್,
ರಾಜ್ಯಭೋಗತ್ಯಾಗದಮಲ ವೈರಾಗಿಗಳ್
ಮನುಜ ತನುಜರ್ ಇಂದು, ಕ್ರಿಸ್ತ ಬುದ್ಧಾದಿಗಳೆ,
ಮಾನವರ ಪೂಜೆ ಗೌರವಗಳನು ಕೈಕೊಳ್ವ
ದೇವತೆಗಳಾಗುವಾ ಕಾಲವೈತಂದಿಹುದು.
ಋಜುದೃಷ್ಟಿ ದೊರೆಕೊಳಲ್ ಮೂರು ಯುಗಗಳ್ ಕಳೆದು
ಕಲಿಕಾಲ ಬೇಕಾಯ್ತು! ಧನ್ಯ, ಕಲಿಯುಗ, ಧನ್ಯ!

– ಕುವೆಂಪು

.... ಗಾಂಧೀಜಿ ಆರಂಭಿಸಿದ ಚಳುವಳಿ ಕಾಳ್ಗಿಚ್ಚಿನ ಹಾಗೆ ದೇಶವ್ಯಾಪಿ ಹರಡುತ್ತಿದ್ದಂತೆ ದೆಹಲಿ ಆಡಳಿತ ಅದನ್ನು ಹತ್ತಿಕ್ಕಲು ಪರದಾಡುವ ಸ್ಥಿತಿಯುಂಟಾಯಿತು. ಲಂಡನ್ ದೊರೆಗಳಿಗೆ ನಡುಕ ಉಂಟಾಗತೊಡಗಿತು. ದಾಂಡಿಯಾತ್ರೆ ವಿಫಲವಾಗಿ ಅರೆಬೆತ್ತಲೆ ಫಕೀರ ಸದ್ದಡಗಿ ಹೋಗುತ್ತಾನೆಂಬ ಅವರ ನಿರೀಕ್ಷೆ ತಲೆಕೆಳಗಾಯಿತು. ದೇಶದ ಪ್ರಮುಖ ಧುರೀಣರೇ ಅಲ್ಲದೇ ಸುಮಾರು ಅರವತ್ತು ಸಾವಿರದಿಂದ ಒಂದು ಲಕ್ಷ ಜನರನ್ನು ಜೈಲಿಗೆ ತಳ್ಳಿ, ಉಗ್ರಕ್ರಮಗಳನ್ನು ಜರುಗಿಸುತ್ತಿದ್ದರೂ ಪರಿಸ್ಥಿತಿಯನ್ನು ಸುಧಾರಿಸಲು ಸಾಧ್ಯವಾಗುತ್ತಿರಲಿಲ್ಲ....



ಕನ್ನಡ ವೈದ್ಯಕೀಯ ಸಾಹಿತ್ಯಕ್ಷೇತ್ರದಲ್ಲಿ ದೊಡ್ಡ ಹೆಸರಾದ ಡಾ। ಎಚ್.ಡಿ. ಚಂದ್ರಪ್ಪಗೌಡರು ಶಿವಮೊಗ್ಗ ಜಿಲ್ಲೆಯ ಹೊಳೆಗದ್ದೆ ಗ್ರಾಮದಲ್ಲಿ 1929ರ ಸೆಪ್ಟೆಂಬರ್ 26ರಂದು ಜನಿಸಿದವರು. ಅವರಿಗೀಗ 76ರ ವಯಸ್ಸು. ತಂದೆ ದುಗ್ಗಪ್ಪ ಗೌಡರು. ತಾಯಿ ಹಾಲಮ್ಮ. ಮೈಸೂರಿನಲ್ಲಿ ವೈದ್ಯಪದವಿ, ಮಂಗಳೂರಿನಲ್ಲಿ ಶಸ್ತ್ರಚಿಕಿತ್ಸೆಯಲ್ಲಿ ಸ್ನಾತಕೋತ್ತರ ಪದವಿ. ಶಿಕಾರಿಪುರ, ಕೆಜಿಎಫ್, ಮೈಸೂರು, ಮಂಗಳೂರು, ಕೊಳ್ಳೇಗಾಲ, ಚಿಕ್ಕಮಗಳೂರು, ಶಿವಮೊಗ್ಗ ಹೀಗೆ ಹಲವು ಕಡೆ ವೈದ್ಯರಾಗಿ 28 ವರ್ಷಗಳ ಸುದೀರ್ಘ ನಿಸ್ಪೃಹ ಸೇವೆ. ಪ್ರಾಮಾಣಿಕ ಸೇವೆಯಿಂದ ವೃತ್ತಿಯ ಘನತೆ ಹೆಚ್ಚಿಸಿದವರು. ಅಪಾರ ಜನಮನ್ನಣೆ ಪಡೆದವರು. ಸಾಹಿತ್ಯ ರಚನೆ ಚಂದ್ರಪ್ಪಗೌಡರ ಪ್ರವೃತ್ತಿ. ಕನ್ನಡದಲ್ಲಿ ಪಾರಿಭಾಷಿಕ ಪದಗಳ ಕೊರತೆಯಿದೆ ಎನ್ನುವ ನೆಪವೊಡ್ಡಿ ವಿಜ್ಞಾನ ಕ್ಷೇತ್ರದಲ್ಲಿ ಕನ್ನಡದ ಅಭಿವ್ಯಕ್ತಿ ಸಾಮರ್ಥ್ಯವನ್ನೇ ಪ್ರಶ್ನಿಸುತ್ತಿದ್ದ ಕಾಲಘಟ್ಟದಲ್ಲಿ ವಿಜ್ಞಾನಕ್ಷೇತ್ರದಲ್ಲೂ ಕನ್ನಡ ಸಮರ್ಥ ಎಂದು ತೋರಿಸಿಕೊಟ್ಟವರಲ್ಲಿ ಡಾ। ಚಂದ್ರಪ್ಪ ಗೌಡರು ಪ್ರಮುಖರು. ಸರಳ, ಸುಲಭ ಕನ್ನಡದಲ್ಲಿ ವೈದ್ಯಕೀಯ ಲೇಖನಗಳನ್ನು ಬರೆದು ಮುಂದಿನವರಿಗೆ ದಾರಿ ತೋರಿದವರು. ವೈದ್ಯಕೀಯ ಕ್ಷೇತ್ರಕ್ಕೆ ಸೀಮಿತಗೊಳ್ಳದೆ 22 ವೈವಿಧ್ಯಮಯ ಗ್ರಂಥಗಳ ಹಾಗೂ 200ಕ್ಕೂ ಹೆಚ್ಚು ಲೇಖನಗಳ ಇಳುವರಿ ಅವರದು. ಅದರಲ್ಲಿ ಜೊಳ್ಳು ಹುಡುಕುವವರು ಸೋಲುವುದು ಖಚಿತ. ಮೂರು ಸಾರಿ ಸಾಹಿತ್ಯ ಅಕಾಡೆಮಿ, ಆರ್ಯಭಟ, ಗೋರೂರು, ವಿಶ್ವಮಾನವ ಮುಂತಾದ ಪ್ರಶಸ್ತಿಗಳು ಸಾಲುಸಾಲಾಗಿ ಅರಸಿಬಂದವು. ಮನೆ-ಮನ ತುಂಬಿದ್ದ ಮಡದಿ ರುಕ್ಮಿಣಿ (ರಾಜಮ್ಮ ) ಈಗಿಲ್ಲ. ಚಂದ್ರಪ್ಪಗೌಡರಿಗೂ ಲಘು ಹೃದಯಾಘಾತವಾಗಿ ದೇಹದ ಕಸುವು ಕುಗ್ಗಿದೆ. ಆದರೂ ಲೇಖನಕೃಷಿ ನಿರಂತರವಾಗಿ ಸಾಗಿದೆ. ಪ್ರೌಢಶಾಲಾ ಹಂತದಲ್ಲೇ ಸ್ವಾತಂತ್ರ್ಯ ಚಳುವಳಿಯಲ್ಲಿ ತೊಡಗಿಕೊಂಡ ಶ್ರೀಯುತರು 'ಮೈಸೂರು ಚಲೋ' ಚಳುವಳಿಯಲ್ಲಿ ಭಾಗವಹಿಸಿ ಸೆರೆಮನೆಗೆ ಹೋದವರು. ಚಿಕ್ಕ ವಯಸ್ಸಿನಲ್ಲೇ ಗಾಂಧೀಜಿಯವರಿಗೆ ಒಲಿದವರು. ಗಾಂಧೀವಾದವನ್ನು ಬದುಕಿ ತೋರಿದವರು. ಅವರ ಎರಡು ಕಿರು ಪ್ರಬಂಧಗಳು ಇಲ್ಲಿ ಪುಸ್ತಿಕೆಯ ರೂಪ ತಳೆದಿವೆ.



ಡಾ। ಎಚ್. ಡಿ. ಚಂದ್ರಪ್ಪಗೌಡ

Ramadhyani 98440-82408

Navika 228557